# ಧಾರವಾಡ ಜಿಲ್ಲೆಯ ವರ್ಣನೆ.



ಬರೆದವರು

ಮಹಾದೇವಪ್ಪಾ ಶಿದ್ದಪ್ಪಾ ಕೇಸರಿ,

ಬಿ. ಎ., ಎಲೆಲ್. ಬಿ., ವಕೀಲ,

ಧಾರವಾಡ.



ಧಾರವಾಡ.

೧೯೨೯.

ಬೆಲೆ ೩ ಆಣೆ.

# ಧಾರವಾಡ ಜಿಲ್ಲೆಯ ವರ್ಣನೆ.





ಬರೆದವರು

ಮಹಾದೇವಪ್ಪಾ ಶಿದ್ದಪ್ಪಾ ಕೇಸರಿ,

ಬಿ. ಎ., ಎಲೆಲ್. ಬಿ., ವಕೀಲ,

ಧಾರವಾಡ.



ಧಾರವಾಡ.

೧೯೨೯.

ಬೆಲೆ ೪ ಆಣೆ.

# ಅರ್ಪಣಪತ್ರಿಕೆ.



ಈ ಪುಸ್ತಕವನ್ನು

ನನ್ನ ಕನ್ನಡ ಶಾಲೆಯ ಗುರುಗಳಾದ

**ಕುರಂದವಾಡ ಕೃಷ್ಣರಾಯರವರಿಗೆ**

ಅತ್ಯಂತ ಪ್ರೇಮಪೂರ್ವಕವಾಗಿ

ಸಮರ್ಪಿಸುತ್ತೇನೆ.

ಎಮ್. ಎಸ್. ಕೇಸರಿ

# ಧಾರವಾಡ ಜಿಲ್ಲೆಯ ವರ್ಣನೆ.



## ೧ನೆಯ ಪ್ರಕರಣ.



### ಅವಶ್ಯವಿರುವ ವ್ಯಾಖ್ಯೆಗಳು.

ಪೂರ್ವ :—ಸೂರ್ಯನು ಮೂಡುವ ದಿಕ್ಕು ಪೂರ್ವ; ಇದಕ್ಕೆ ಮೂಡಲವೆಂದೂ ಅನ್ನುತ್ತಾರೆ.

ಪಶ್ಚಿಮ :—ಸೂರ್ಯನು ಮುಳುಗುವ ದಿಕ್ಕು ಪಶ್ಚಿಮ; ಇದಕ್ಕೆ ಪಡುವಲವೆಂದೂ ಹೆಸರು.

ಉತ್ತರ :—ಪೂರ್ವಕ್ಕೆ ಮೋರೆ ಮಾಡಿ ನಿಂತರೆ ಎಡಕ್ಕೆ ಆಗುವದು ಉತ್ತರ; ಇದಕ್ಕೆ ಬಡಗಲವೆಂದೂ ಅನ್ನುತ್ತಾರೆ.

ದಕ್ಷಿಣ :—ಪೂರ್ವಕ್ಕೆ ಮೋರೆ ಮಾಡಿ ನಿಂತರೆ ಬಲಕ್ಕೆ ಆಗುವ ದಿಕ್ಕು ದಕ್ಷಿಣ; ಇದಕ್ಕೆ ತೆಂಕಣವೆಂದೂ ಹೆಸರು.

ಉಪದಿಕ್ಕುಗಳು :—ಪೂರ್ವ-ದಕ್ಷಿಣಗಳ ನಡುವಿನ ಮೂಲೆಗೆ ಆಗ್ನೇಯವೆನ್ನುತ್ತಾರೆ. ದಕ್ಷಿಣ-ಪಶ್ಚಿಮಗಳ ನಡುವಿನ ಮೂಲೆಗೆ ನೈಋತ್ಯವೆನ್ನುತ್ತಾರೆ. ಪಶ್ಚಿಮ-ಉತ್ತರಗಳ ನಡುವಿನ ಮೂಲೆಗೆ ವಾಯವ್ಯವೆನ್ನುತ್ತಾರೆ ಉತ್ತರ-ಪೂರ್ವಗಳ ನಡುವಿನ ಮೂಲೆಗೆ ಈಶಾನ್ಯವೆನ್ನುತ್ತಾರೆ.

**ನಕಾಶದ ಮೇಲೆ ದಿಕ್ಕುಗಳನ್ನು ತಿಳಿಯುವ ರೀತಿ.**

ನಕಾಶವನ್ನು ಗೋಡೆಯ ಮೇಲೆ ತೂಗ ಹಾಕಿರುತ್ತಾರಲ್ಲವೇ? ಅದರ ಮೇಲ್ಭಾಗವೇ ಉತ್ತರವು. ಬಲಗಡೆಯ ದಿಕ್ಕು ಪೂರ್ವವು. ನಕಾಶದ ಕೆಳಭಾಗವೇ ದಕ್ಷಿಣ. ಎಡಭಾಗವೇ ಪಶ್ಚಿಮ.

ದಿನ್ನೆ :—ಸುತ್ತುಮುತ್ತಲಿನ ಭೂಮಿಗಿಂತ ಸ್ವಲ್ಪ ಎತ್ತರವಾಗಿರುವ ಪ್ರದೇಶಕ್ಕೆ ದಿನ್ನೆ ಅನ್ನುತ್ತಾರೆ.

ಗುಡ್ಡ :—ದಿನ್ನೆಯು ಎತ್ತರವಾಗಿದ್ದರೆ ಅದಕ್ಕೆ ಗುಡ್ಡವೆನ್ನುತ್ತಾರೆ.

ಪರ್ವತ:—ಗುಡ್ಡವು ತೀರ ಎತ್ತರವಾಗಿದ್ದರೆ ಅದಕ್ಕೆ ಪರ್ವತವೆನ್ನುತ್ತಾರೆ.

ಪರ್ವತಾವಳಿ :—ಪರ್ವತಗಳು ಸಾಲಾಗಿ ಇದ್ದರೆ ಅದಕ್ಕೆ ಪರ್ವತಾವಳಿ ಎನ್ನುವರು.

ಕಣಿವೆ :—ಎರಡು ಗುಡ್ಡಗಳ ಅಥವಾ ಪರ್ವತಗಳ ನಡುವಿನ ಹಾದಿಗೆ ಕಣಿವೆ ಎನ್ನುತ್ತಾರೆ.

ದರಿ ಅಥವಾ ಕಂದರ:—ಎರಡು ಗುಡ್ಡಗಳ ಅಥವಾ ಪರ್ವತಗಳ ನಡುವಿನ ಪ್ರದೇಶವು ತಗ್ಗಾಗಿದ್ದರೆ ಅದಕ್ಕೆ ದರಿ ಅಥವಾ ಕಂದರವೆಂಬ ಹೆಸರು.

ಬೈಲು :—ಗುಡ್ಡ, ದಿನ್ನೆಗಳು ಇಲ್ಲದೆ ವಿಸ್ತಾರವಾಗಿ ಹಬ್ಬಿದ ಗಿಡಗಳಿಲ್ಲದ ಸಮನೆಲಕ್ಕೆ ಬೈಲು ಅನ್ನುತ್ತಾರೆ.

ಕೆರೆ :—ಸಣ್ಣ ಸಣ್ಣ ನೀರಿನ ಸಮುಚ್ಚಯಕ್ಕೆ ಕೆರೆಯನ್ನುವರು.

ಸರೋವರ :—ಕೆರೆಯು ಬಹು ದೊಡ್ಡದಿದ್ದರೆ ಅದಕ್ಕೆ ಸರೋವರವೆನ್ನುವರು.

ಕಾಲುವೆ :—ನೀರು ಹರಿದು ಹೋಗುವ ಸಣ್ಣ ಸಣ್ಣ ಪ್ರವಾಹಗಳಿಗೆ ಕಾಲುವೆಗಳೆನ್ನುತ್ತಾರೆ.

ಹಳ್ಳ :—ಕಾಲುವೆಯು ದೊಡ್ಡದಿದ್ದರೆ ಅದಕ್ಕೆ ಹಳ್ಳವೆಂಬ ಹೆಸರು. ಕಾಲುವೆಗಳೂ ಹಳ್ಳಗಳೂ ಬಹುತರವಾಗಿ ಆಗಾಗ್ಗೆ ಬತ್ತುತ್ತವೆ.

ಹೊಳೆ:—ಹಳ್ಳವು ದೊಡ್ಡದಿದ್ದು ನೀರು ಯಾವಾಗಲೂ ಹರಿಯುತ್ತಿದ್ದರೆ ಅದಕ್ಕೆ ಹೊಳೆ ಎಂಬ ಹೆಸರು.

ಉಗಮ :—ಹೊಳೆಯು ಹುಟ್ಟುವ ಸ್ಥಳಕ್ಕೆ ಉಗಮ ಅಥವಾ ನದಿಯ ಮೂಲವೆಂದು ಹೆಸರು.

ಸಂಗಮ :—ಒಂದು ನದಿಯು ಮತ್ತೊಂದು ನದಿಗೆ ಕೂಡುವ ಸ್ಥಳಕ್ಕೆ ಸಂಗಮವೆನ್ನುವರು.

ಮುಖ :—ಹೊಳೆಯು ಸಮುದ್ರಕ್ಕೆ ಕೂಡುವ ಸ್ಥಳಕ್ಕೆ ಮುಖವೆಂಬ ಹೆಸರು.

ಉಪನದಿ :—ದೊಡ್ಡ ದೊಡ್ಡ ನದಿಗಳಿಗೆ ಬಂದು ಕೂಡುವ ಸಣ್ಣ ಸಣ್ಣ ನದಿಗಳಿಗೆ ಉಪನದಿ ಎಂಬ ಹೆಸರು ಉದಾಹರಣೆ:—ತುಂಗಭದ್ರಾ ನದಿಯು ಹೊರ್ತಾಗಿ ಧಾರವಾಡ ಜಿಲ್ಹೆಯಲ್ಲಿ ಹರಿಯುವ ಯಾವತ್ತೂ ನದಿಗಳು ಉಪನದಿಗಳು.

———

# ೨ನೆಯ ಪ್ರಕರಣ.



ಪ್ರಿಯ ವಿದ್ಯಾರ್ಥಿಗಳೇ, ಹೋದ ವರ್ಷ ನೀವು ನಿಮ್ಮ ತಾಲೂಕಿನ ವರ್ಣನೆಯನ್ನು ಕಲಿತಿರುವಿರಿ. ತಾಲೂಕು ಎಂದು ಯಾತಕ್ಕೆ ಅನ್ನುತ್ತಾರೆ ಹೇಳಿರಿ ನೋಡುವ? ಸರಕಾರದವರು ರಾಜ್ಯಭಾರ ನಡಿಸಲಿಕ್ಕೆ ಎಷ್ಟೋ ಹಳ್ಳಿಗಳನ್ನು ಕೂಡಿಸಿ ಅದಕ್ಕೆ ತಾಲೂಕು ಎಂಬ ಹೆಸರನ್ನು ಕೊಟ್ಟಿರುತ್ತಾರಲ್ಲವೇ? ತಾಲೂಕಿನ ರಾಜ್ಯಭಾರ ನಡೆಸುವ ಯಾವತ್ತೂ ಮುಖ್ಯ ಮುಖ್ಯ ಅಧಿಕಾರಿಗಳು ತಾಲೂಕಿನ ಮುಖ್ಯ ಸ್ಥಳದಲ್ಲಿ ಇರುತ್ತಾರೆ. ಪ್ರತಿಯೊಂದು ತಾಲೂಕಿಗೆ ಈ ಮುಖ್ಯ ಸ್ಥಳಗಳ ಹೆಸರು ಬಂದದೆ. ಇಂಥ ಎಷ್ಟೋ ತಾಲೂಕುಗಳನ್ನು ಕೂಡಿಸಿದರೆ ಅದಕ್ಕೆ ಜಿಲ್ಹೆ ಅಥವಾ ಡಿಸ್ಟ್ರಿಕ್ಟ ಎಂಬ ಹೆಸರು. ಡಿಸ್ಟ್ರಿಕ್ಟಿನ ಯಾವತ್ತೂ ಮುಖ್ಯಾಧಿಕಾರಿಗಳು ಧಾರವಾಡದಲ್ಲಿ ಇರುತ್ತಾರೆ. ತಾಲೂಕಿನ ಮುಖ್ಯಾಧಿಕಾರಿಗಳು ಇರುವ ಊರಿನ ಹೆಸರು ಆಯಾ ತಾಲೂಕುಗಳಿಗೆ ಬಂದಿರುವಂತೆ ಜಿಲ್ಹೆಯ ಮುಖ್ಯಾಧಿಕಾರಿಗಳು ಇರುವ ಧಾರವಾಡದ ಹೆಸರು ನಮ್ಮ ಜಿಲ್ಹೆಗೆ ಬಂದಿದೆ. ಕಾರಣ ನಾವಿರುವ ಜಿಲ್ಹೆಗೆ ಧಾರವಾಡ ಜಿಲ್ಹೆ ಅಥವಾ ಧಾರವಾಡ ಡಿಸ್ಟ್ರಿಕ್ಟು ಎಂಬ ಹೆಸರು.

ಧಾರವಾಡ ಜಿಲ್ಹೆಯು ಹನ್ನೊಂದು ತಾಲೂಕು, ಎರಡು ಪೇಠೆಗಳು ಕೂಡಿ ಆಗಿರುತ್ತದೆ ಪೇಠಾ ಅಂದರೆ ಸಣ್ಣ ತಾಲೂಕು ಧಾರವಾಡ ಜಿಲ್ಹೆಯಲ್ಲಿ, (೧) ಧಾರವಾಡ, (೨) ಹುಬ್ಬಳ್ಳಿ, (೩) ಕಲಘಟಗಿ, (೪) ಬಂಕಾಪೂರ, (೫) ಹಾವೇರಿ, (೬) ಹಾನಗಲ್ಲ (೭) ಕೋಡ, (೮) ರಾಣೇಬೆನ್ನೂರು, (೯) ನವಲಗುಂದ, (೧೦) ಗದಗ, (೧೧) ರೋಣ ಎಂಬ ಹನ್ನೊಂದು ತಾಲೂಕುಗಳೂ, (೧) ನರಗುಂದ ಮತ್ತು (೨) ಮುಂಡರಗಿ ಎಂಬ ಎರಡು ಪೇಠೆಗಳೂ ಇರುತ್ತವೆ

---

## ೩ನೆಯ ಪ್ರಕರಣ.

### ತಾಲೂಕಿನ ಮುಖ್ಯ ಸ್ಥಳಗಳು.

ಧಾರವಾಡ :—ಇದು ಧಾರವಾಡ ಜಿಲ್ಹೆಯ ಮುಖ್ಯ ಸ್ಥಳವು. ಧಾರವಾಡವು ಜಿಲ್ಹೆಯ ಮುಖ್ಯ ಸ್ಥಳವಾಗಲಿಕ್ಕೆ ಐತಿಹಾಸಿಕ ಕಾರಣವೂ ಉಂಟು. ಪೇಶ್ವೆ ಎಂಬ ಹಿಂದೂ ಅರಸರು ರಾಜ್ಯಭಾರ ಮಾಡುತ್ತಿದ್ದಾಗ ಧಾರವಾಡವು ಒಂದು

ಸುಭೆ ಅಂದರೆ ಅವರ ರಾಜ್ಯದ ಒಂದು ಮಹತ್ವದ ಭಾಗವಾಗಿತ್ತು. ಧಾರವಾಡದಲ್ಲಿ ಪೇಶ್ವೆಯವರ ಹೆಸರಾದ ಸರದಾರರಾದ ಬಾಪು ಗೋಖಲೆ ಎಂಬ ಸರದಾರರು ಇರುತ್ತಿದ್ದರು. ಆದ್ದರಿಂದ ಇಲ್ಲಿ ಪೂರ್ವ ಕಾಲದಿಂದ ಒಂದು ಬಲವಾದ ಕೋಟೆಯುಂಟು. ಪೇಶ್ವೆಯವರಿಂದ ಇಂಗ್ಲೀಷರು ಈ ಸುಭೆಯನ್ನು ತೆಗೆದುಕೊಂಡ ಮೇಲೆ ಧಾರವಾಡವನ್ನೇ ಅವರು ಜಿಲ್ಹೆಯ ಮುಖ್ಯ ಸ್ಥಳವನ್ನಾಗಿ ಇಟ್ಟುಕೊಂಡರು. ಆದರೆ ಕ್ರಿ. ಶ. ೧೮೫೭ರಲ್ಲಿ ಹಿಂದುಸ್ಥಾನದಲ್ಲೆಲ್ಲ ದೊಡ್ಡ ಬಂಡಾಯವೆದ್ದ ಕಾಲಕ್ಕೆ ಈ ಕೋಟೆಯು ವೈರಿಗಳ ಕೈಸೇರಬಾರದೆಂದು ಅದನ್ನು ಕೆಡವಿಬಿಟ್ಟರು. ಧಾರವಾಡವೆಂಬ ಪಟ್ಟಣವು ಒಂದೇ ಊರಲ್ಲ. ಇದು ಹದಿಮೂರು ಹಳ್ಳಿಗಳಿಂದ ಕೂಡಿ ಆಗಿರುತ್ತದೆ. (೧) ಧಾರವಾಡ, (೨) ಮದಿಹಾಳ, (೩) ಹಾವೇರಿಪೇಟೆ, (೪) ಗುಲಗಂಜಿಕೊಪ್ಪ, ೫) ಮಾಳಾಪೂರ, (೬) ಸೈದಾಪೂರ, (೭) ಕಾಮಲಾಪೂರ, (೮) ನಾರಾಯಣಪೂರ, (೯) ಹೊಸಯಲ್ಲಾಪೂರ, (೧೦) ಸಪ್ತಾಪೂರ, (೧೧) ಮಾಳಮಡ್ಡಿ ಅಥವಾ ಗಿಬ್‌ಟಾವುನ, (೧೨) ರಟ್ಟೆದುರ್ಗ ಅಥವಾ ರಡ್ಡೀ ಸೊಸಾಯಿಟಿ, (೧೩) ಸಾರಸ್ವತಪುರ. ಮೊದಲಿನ ಒಂಭತ್ತು ಹಳ್ಳಿಗಳು ಪೂರ್ವಕಾಲದಿಂದಲೂ ಇರುತ್ತವೆ. ಕಡೆಯವು ನಾಲ್ಕು ಹೊಸದಾಗಿ ಕಟ್ಟಿದ ಊರುಗಳು. ಇವು

ಗಳಿಗೆ ಎಕ್ಸ್ಟೆನ್ಸನ್ ಎಂಬ ಹೆಸರು. ಇಲ್ಲಿ ಕಟ್ಟಿರುವ ಬಂಗಲೆಗಳು ಒಂದಕ್ಕೊಂದು ಹೊಂದದಂತೆ ಬೇರೆ ಬೇರೆಯಾಗಿ ಕಟ್ಟಲ್ಪಟ್ಟಿವೆ. ಪ್ರತಿಯೊಂದು ಬಂಗಲೆಯ ಸುತ್ತುಮುತ್ತು ಹೂದೋಟಗಳುಂಟು. ಈ ಎಕ್ಸ್ಟೆನ್ಸನ್ನಗಳು ಎತ್ತರವಾದ ದಿನ್ನೆಗಳ ಮೇಲೆ ಕಟ್ಟಲ್ಪಟ್ಟಿವೆ. ಬಂಗಲೆಗಳು ಸುಧಾರಿಸಿದ ಪದ್ಧತಿಯಂತೆ ಕಿಡಿಕೆಗಳನ್ನು ಬಿಟ್ಟು ಕಟ್ಟಿರುವದರಿಂದ ಬಂಗಲೆಗಳಲ್ಲಿ ಉತ್ತಮವಾದ ಹವೆ ಮತ್ತು ಬೆಳಕು ಸಾಕಷ್ಟು ಇರುತ್ತದೆ. ಆದ್ದರಿಂದ ಇಲ್ಲಿ ಪ್ಲೇಗಿನ ಉಪಟಳವು ಕಡಿಮೆ.

ಧಾರವಾಡದಲ್ಲಿ ಕೋರ್ಟಿಯ ಹತ್ತರ ಊರ ಮಾರ್ಕೇಟು ಉಂಟು. ಈ ಮಾರ್ಕೇಟಿನಲ್ಲಿ ಮುಖ್ಯ ಮುಖ್ಯ ದಲಾಲರ ಅಂಗಡಿಗಳು ಉಂಟು. ಇಲ್ಲಿ ಎಲ್ಲ ತರಹದ ಕಾಯಿಪಲ್ಲೆಗಳ ಮತ್ತು ಕಾಳುಕಡಿಗಳ ವ್ಯಾಪಾರವೂ ಆಗುತ್ತದೆ. ಧಾರವಾಡದಲ್ಲಿ ವಾರಕ್ಕೆ ಎರಡಾವರ್ತಿ ಸಂತೆಯು ನೆರೆಯುತ್ತದೆ. ಮಂಗಳವಾರ ಆಗುವ ಸಂತೆಯು ದೊಡ್ಡದು ಆ ದಿವಸ ದನಗಳ ವ್ಯಾಪಾರವೂ ತಕ್ಕಮಟ್ಟಿಗೆ ನಡೆಯುತ್ತದೆ. ಮಂಗಳವಾರ ಸಂತೆಯು ಮಾರ್ಕೇಟಿನಲ್ಲಿಯೂ ಅದರ ಹತ್ತರವಿರುವ ಬೈಲು ಜಾಗೆಯಲ್ಲಿಯೂ ಕೂಡುತ್ತದೆ. ಆದಿತ್ಯವಾರ ಆಗುವ ಸಂತೆಯು ಸಣ್ಣದು; ಅದು ಊರಲ್ಲಿ ಕೂಡುವದು.

ಧಾರವಾಡಕ್ಕೆ ನೀರನ್ನು ಪೂರೈಸುವದಕ್ಕಾಗಿ ಮುನಿಸಿಪಾಲಿಟಿಯವರು ನಳಗಳನ್ನು ಹಾಕಿರುತ್ತಾರೆ. ಧಾರವಾಡದಿಂದ ಎರಡು ಎರಡೂವರೆ ಮೈಲಿನ ಮೇಲೆ ಕೆಲಗೇರಿ ಎಂಬುದೊಂದು ದೊಡ್ಡ ಕೆರೆಯಿದೆ ಈ ಕೆರೆಯಿಂದ ನಳಗಳನ್ನು ಹಾಕಿ ನೀರನ್ನು ಊರಿಗೆ ತಂದಿರುತ್ತಾರೆ. ಆದರೆ ಈ ನೀರು ಧಾರವಾಡಕ್ಕೆ ಸಾಕಷ್ಟು ಆಗದ್ದರಿಂದ ಧಾರವಾಡಕ್ಕೆ ನೀರಿನ ತೊಂದರೆಯು ಮೇಲಿಂದಮೇಲೆ ಆಗುತ್ತದೆ.

ಧಾರವಾಡದಿಂದ ಎರಡು ಮೈಲಿನ ಮೇಲೆ ಜಕ್ಕಣಾಚಾರ್ಯನು ಕಟ್ಟಿದ ಸೋಮೇಶ್ವರ ದೇವರ ಬಹು ಪ್ರಸಿದ್ಧವಾದ ಗುಡಿಯದೆ ಇಲ್ಲಿರುವ ಹೊಂಡದಲ್ಲಿ ಶಾಲ್ಮಲಾ ನದಿಯು ಉಗಮವಾಗಿರುತ್ತದೆ.

ಶಿಕ್ಷಣಾಲಯಗಳು :—(೧) ಗವ್ಹರ್ನಮೆಂಟ ಹಾಯಸ್ಕೂಲು, (೨) ಮಿಶನ್ ಹಾಯಸ್ಕೂಲು, (೩) ಲಿಂಗಾಯತ ಹಾಯಸ್ಕೂಲು, (೪) ಕರ್ನಾಟಕ ಹಾಯಸ್ಕೂಲು, (೫) ವ್ಹಿಕ್ಟೋರಿಯಾ ಹಾಯಸ್ಕೂಲು; ಎಂಬ ಐದು ಹೈಸ್ಕೂಲುಗಳು ಉಂಟು ಇಲ್ಲಿ ಮ್ಯಾಟ್ರಿಕದವರೆಗೆ ಅಭ್ಯಾಸವಾಗುತ್ತದೆ,

ಸ್ತ್ರೀಯರಿಗಾಗಿ ಒಂದು ಗರ್ಲ್ಸ ಎ ವ್ಹಿ. ಸ್ಕೂಲನ್ನು ಮಾಡಿರುತ್ತಾರೆ ಇಲ್ಲಿ ವಿದ್ಯಾರ್ಥಿನಿಯರು ಇಂಗ್ಲೀಷ ಐದ

ನೆಯ ಇಯತ್ತೆಯವರೆಗೆ ಅಭ್ಯಾಸ ಮಾಡುತ್ತಾರೆ. ಕರ್ನಾಟಕ ಮಹಿಳಾ ವಿದ್ಯಾಲಯವೆಂಬುದೊಂದು ಬೇರೊಂದು ಸ್ತ್ರೀಯರ ಶಾಲೆಯೂ ಇರುತ್ತದೆ ಜಿಲ್ಹೆಯ ಕನ್ನಡ ಗಂಡು ಹುಡುಗರ ಮತ್ತು ಹುಡುಗಿಯರ ಶಾಲೆಗಳ ಮಾಸ್ತರ ಜನರನ್ನು ತಯಾರ ಮಾಡಲಿಕ್ಕೆ ಗಂಡಸರ ಸಲುವಾಗಿ ಒಂದು, ಹೆಂಗಸರ ಸಲುವಾಗಿ ಒಂದು ಹೀಗೆ ಎರಡು ಟ್ರೇನಿಂಗ ಕಾಲೇಜುಗಳೂ ಉಂಟು

ಕರ್ನಾಟಕ ಕಾಲೇಜ :—ಇಲ್ಲಿ ಮ್ಯಾಟ್ರಿಕ್ ಪಾಸಾದ ಮೇಲೆ ಬಿ. ಎ. ವರೆಗೆ ಶಿಕ್ಷಣ ಕೊಡುತ್ತಾರೆ. ಈ ಕಾಲೇಜದ ಕಟ್ಟಡವು ಬಹು ಭವ್ಯವಾದದ್ದದೆ. ಇದು ಎಮ್. ಆ್ಯಂಡ ಎಸ್ ರೇಲ್ವೆ ಕಂಪನಿಯವರ ಹೆಡ್ ಆಫೀಸು ಆಗಿತ್ತು. ರೇಲ್ವೆ ಕಂಪನಿಯವರು ತಮ್ಮ ಹೆಡ್ ಆಫೀಸನ್ನು ಮದ್ರಾಸಕ್ಕೆ ಒಯ್ದರು. ಈ ಕಟ್ಟಡವನ್ನು ಸರಕಾರದವರು ಕರ್ನಾಟಕ ಕಾಲೇಜದ ಸಲುವಾಗಿ ಕೊಂಡುಕೊಂಡರು.

ಇಲ್ಲಿ ಮೂರು ಸಂಸ್ಕೃತ ಶಾಲೆಗಳು ಅವೆ. ಶ್ರೀಮತ್ಯುಂಜಯ ಸ್ವಾಮಿಗಳು ಕಾಲೇಜದ ವಿದ್ಯಾರ್ಥಿಗಳಿಗೆಂದು ಕಟ್ಟಿಸಿರುವ ಫ್ರೀ ಬೋರ್ಡಿಂಗು ನೋಡತಕ್ಕಂತಹದು ಇರುತ್ತದೆ.

ಇಮಾರತುಗಳು :—ಕರ್ನಾಟಕ ಕಾಲೇಜು, ಹೊಸದಾಗಿ ಕಟ್ಟಿಸಿದ ಮುನಿಸಿಪಲ್ ಕಚೇರಿ, ಲಿಂಗಾಯತ ಟವುನ ಹಾಲು, ಸಂಸ್ಕೃತ ಪಾಠಶಾಲೆ ಇವುಗಳು ನೋಡತಕ್ಕಂತಹವಿರುತ್ತವೆ. ಕಿತ್ತೂರ ಚನ್ನಮ್ಮನು ಕೊಂದಂತಹ ಥ್ಯಾಕರೇ ಸಾಹೇಬರ ಗೋರಿಯೂ ನೋಡತಕ್ಕಂತಹದು ಇರುತ್ತದೆ

ಕೋರ್ಟುಗಳು :—ಇಲ್ಲಿ ಡಿಸ್ಟ್ರಿಕ್ಟ ಮತ್ತು ಸೆಸೆನ್ಸ ಜಜ್ಜರ ಕೋರ್ಟು, ಅಸಿಸ್ಟಂಟ ಜಜ್ಜರ ಕೋರ್ಟು, ಫರ್ಸ್ಟ ಕ್ಲಾಸ-ಸಬ್‌ಜಜ್ಜರ ಕೋರ್ಟು, ಸೆಕಂಡ ಕ್ಲಾಸ ಸಬ್‌ಜಜ್ಜರ ಕೋರ್ಟುಗಳೂ ಉಂಟು. ಧಾರವಾಡ ಡಿಸ್ಟ್ರಿಕ್ಟ ಮತ್ತು ಸೆಸೆನ್ಸ ಜಜ್ಜರಿಗೆ ಧಾರವಾಡ ಜಿಲ್ಹೆಯ ಬೇರೆ ಬೇರೆ ಭಾಗಗಳಲ್ಲಿ ಅಂದರೆ ಹುಬ್ಬಳ್ಳಿಯಲ್ಲಿ, ಗದಗದಲ್ಲಿ, ಹಾವೇರಿಯಲ್ಲಿ ಇರುವ ಸಬ್‌ಜಜ್ಜರು ಆಧೀನರಾಗಿರುತ್ತಾರೆ.

ಧಾರವಾಡ ಜಿಲ್ಹೆಯ ಕಲೆಕ್ಟರ ಸಾಹೇಬರು ಧಾರವಾಡ ದಲ್ಲಿ ಇರುತ್ತಾರೆ ಧಾರವಾಡ ಜಿಲ್ಹೆಯನ್ನು ಮೂರು ವಿಭಾಗಗಳನ್ನಾಗಿ ವಿಭಾಗಿಸಿದ್ದಾರೆ. ೧ನೆಯ ಡಿವ್ಹಿಜನ್, ೨ನೆಯ ಡಿವ್ಹಿಜನ್ ಮತ್ತು ೩ನೆಯ ಡಿವ್ಹಿಜನ್.

ಪೋಲೀಸ ಖಾತೆಯ ಮುಖ್ಯಾಧಿಕಾರಿಗಳಾದ ಸುಪರಿಂಟೆಂಡೆಂಟ ಆಫ್ ಪೋಲೀಸ, ಡೆಪ್ಯೂಟಿ ಸುಪರಿಂಟೆಂಡೆಂಟ ಆಫ್

ಪೋಲೀಸರೂ ಇಲ್ಲಿಯೇ ಇರುತ್ತಾರೆ. ಜಿಲ್ಹೆಯೊಳಗಿನ ಯಾವತ್ತೂ ಪೋಲೀಸರರೂ, ಸಬ್ ಇನ್ಸಪೆಕ್ಟರರೂ ಇವರಿಗೆ ಆಧೀನರಾಗಿರುತ್ತಾರೆ.

ಇರಿಗೇಶನ್ ಖಾತೆಯ ಮುಖ್ಯಾಧಿಕಾರಿಯಾದ ಎಕ್ಸ್ಯೆಕ್ಯೂಟಿವ್ಹ ಇಂಜನೀಯರರೂ, ಫಾರೆಸ್ಟ ಖಾತೆಯ ಮುಖ್ಯಾಧಿಕಾರಿಯಾದ ಕಂಝರ್ವೇಟರ ಆಫ್ ಫಾರೆಸ್ಟರರೂ ಇಲ್ಲಿಯೇ ಇರುತ್ತಾರೆ.

ಇವರಲ್ಲದೆ ಅಸಿಸ್ಟಂಟ ಡಿರೆಕ್ಟರ ಆಫ್ ಅಗ್ರಿಕಲ್ಚರ ಎಂಬ ಶೇತಕೀ ಖಾತೆಯ ಮುಖ್ಯಾಧಿಕಾರಿಯೂ, ಅಸಿಸ್ಟಂಟ ರಜಿಸ್ಟ್ರಾರ ಎಂಬ ಕೋ-ಆಪರೇಟಿವ್ಹ ಖಾತೆಯ ಮುಖ್ಯಾಧಿಕಾರಿಯೂ ಇಲ್ಲಿಯೇ ಇರುತ್ತಾರೆ.

ಧಾರವಾಡದಲ್ಲಿ ಒಕ್ಕಲಿಗರಿಗೆ ತೋರಿಸಲಿಕ್ಕೆಂದು ಮಾದರಿಯ ಹೊಲವ (ಫಾರ್ಮ) ನ್ನು ಸರಕಾರದವರು ಇಡಿಸಿರುತ್ತಾರೆ.

ಕೋ-ಆಪರೇಟಿವ್ಹ ಸೊಸಾಯಿಟಿಗಳು ಬೆಳೆದ ಮೇಲೆ ಧಾರವಾಡದಲ್ಲಿ ಬ್ಯಾಂಕಿನ ಬೆಳವಣಿಗೆಯು ಚನ್ನಾಗಿ ಆಗಿರುವದು. (೧) ಕರ್ನಾಟಕ ಸೆಂಟ್ರಲ್ ಬ್ಯಾಂಕ, (೨) ಸದರ್ನ ಮರಾಠಾ ಅರ್ಬನ್ ಬ್ಯಾಂಕ, (೩) ರಡ್ಡೀ ಬ್ಯಾಂಕ, (೪)

ಅಂಕಲಗಿ ಬ್ಯಾಂಕ, (೫) ಅರ್ಬನ್ ಕೋ-ಆಪರೇಟಿವ್ಹ ಬ್ಯಾಂಕು, (೬) ಧಾರವಾಡ ಬ್ಯಾಂಕೆ ಎಂಬ ಬ್ಯಾಂಕುಗಳು ಒಳ್ಳೆಯ ಊರ್ಜಿತ ಸ್ಥಿತಿಯಲ್ಲಿ ಇರುತ್ತವೆ.

ಡಿಸ್ಟ್ರಿಕ್ಟ ಬೋರ್ಡಿನ ಹೆಡ್ ಆಫೀಸು ಇಲ್ಲಿಯೇ ಇರುತ್ತದೆ. ಸರಕಾರದವರು ತಮ್ಮ ಕಡೆಗೆ ಇದ್ದ ಪ್ರಾಯಮರಿ ಎಜ್ಯೂಕೇಶನ್ನದ ಯಾವತ್ತೂ ಅಧಿಕಾರವನ್ನೂ ಮತ್ತು ಜಿಲ್ಹೆಯ ಯಾವತ್ತು ಲೈನಮಾರ್ಗಗಳ ಸ್ವಾಮಿತ್ವವನ್ನೂ ಡಿಸ್ಟ್ರಿಕ್ಟ ಬೋರ್ಡಿಗೆ ಬಿಟ್ಟುಕೊಟ್ಟಿರುತ್ತಾರೆ. ಡಿಸ್ಟ್ರಿಕ್ಟ ಬೋರ್ಡಿಗೆ ಮೆಂಬರ ಜನರನ್ನು ಆರಿಸುವ ಅಧಿಕಾರವನ್ನು ಸರಕಾರದವರು ಜನರಿಗೆ ಒಪ್ಪಿದ್ದಾರೆ. ಯೋಗ್ಯ ಜನರನ್ನು ಆರಿಸಿ ಕೊಟ್ಟು ಜಿಲ್ಹೆಯ ಉಪಕಾರವಾಗುವಂತೆ ಮಾಡುವದು ಹೋಟರ ಜನರ ಕೈಯಲ್ಲಿ ಅದೆ.

ಮುಂಬಯಿ ಕೌನ್ಸಿಲಕ್ಕೆ ಇಬ್ಬರು ಮೆಂಬರರನ್ನು ಆರಿಸಿ ಕಳುಹಿಸುವ ಅಧಿಕಾರವು ಧಾರವಾಡ ಜಿಲ್ಹೆಯ ಹೋಟರ ಜನರಿಗೆ ಕೊಡಲ್ಪಟ್ಟಿದೆ.

ಸಾರ್ವಜನಿಕ ಸಂಸ್ಥೆಗಳು :—ಇಲ್ಲಿ ಲಿಂಗಾಯತ ಎಜ್ಯೂಕೇಶನ್ ಫಂಡು ಎಂಬುದೊಂದು ಸಾರ್ವಜನಿಕ ಸಂಸ್ಥೆಯು ಇರುತ್ತದೆ. ಈ ಸಂಸ್ಥೆಯಲ್ಲಿ ಎರಡು ಲಕ್ಷಕ್ಕಿಂತ ಹೆಚ್ಚಿಗಾದ

ಹಣವು ಶೇಖರಿಸಿ ಇಡಲ್ಪಟ್ಟಿದೆ. ಈ ಹಣದ ಬಡ್ಡಿಯಲ್ಲಿ ಹಾಯಸ್ಕೂಲುಗಳಲ್ಲಿ ಓದುವ ವಿದ್ಯಾರ್ಥಿಗಳಿಗೂ, ಕಾಲೇಜದಲ್ಲಿ ಓದುವ ವಿದ್ಯಾರ್ಥಿಗಳಿಗೂ ಸ್ಕಾಲರಸಿಪ್ಪು ಕೊಡುತ್ತಾರೆ. ಈ ಫಂಡಿನಿಂದ ಲಿಂಗಾಯತರಲ್ಲಿ ವಿದ್ಯಾಭಿವೃದ್ಧಿಯು ಎಷ್ಟೋ ಪಾಲು ಹೆಚ್ಚಾಗಿದೆ.

ಇಲ್ಲಿ ನೇಟಿವ್ಹ ಜನರಲ್ ಲಾಯಬ್ರರಿಯುಂಟು. ಇಲ್ಲಿ ಯಾವತ್ತು ಮುಖ್ಯ ಮುಖ್ಯ ವರ್ತಮಾನ ಪತ್ರಗಳನ್ನೂ ಮತ್ತು ಮಾಸಿಕ ಪತ್ರಿಕೆಗಳನ್ನೂ ತರಿಸಿ ಇಟ್ಟಿರುತ್ತಾರೆ. ಇದು ಅಲ್ಲದೆ ಮಿತ್ರಸಮಾಜವೆಂಬುದೊಂದು ಸಂಸ್ಥೆಯದೆ. ಇಲ್ಲಿ ಊರ ಪ್ರಮುಖ ಜನರು ದಿನಾಲು ಸಾಯಂಕಾಲದಲ್ಲಿ ಕೂಡಿ ಆಟಪಾಟಗಳಲ್ಲಿ ಕಾಲಕಳೆಯುತ್ತಾರೆ.

ಕರ್ನಾಟಕ ವಿದ್ಯಾವರ್ಧಕ ಸಂಘವೆಂಬುದೊಂದು ಕರ್ನಾಟಕದ ವಾಙ್ಮಯವನ್ನು ಅಭ್ಯಾಸಿಸಿ ಬೆಳೆಯಿಸುವ ಸಂಸ್ಥೆಯದೆ. ಕರ್ನಾಟಕ ಇತಿಹಾಸಮಂಡಳವೆಂಬುದೊಂದು ಐತಿಹಾಸಿಕ ಸಂಘವೂ ಇರುತ್ತದೆ.

ಇಲ್ಲಿ ಎಡ್ವರ್ಡ ಪಾರ್ಕವೆಂಬುದೊಂದು ಸಾರ್ವಜನಿಕ ಹೂದೋಟವದೆ. ಅಲ್ಲಿ ಧಾರವಾಡದ ನಾಗರೀಕರು ಸಾಯಂಕಾಲದಲ್ಲಿ ಸೇರಿ ಸುಖವಾಗಿ ಕಾಲ ಕಳೆಯುವರು.

ಧಾರವಾಡವು ಸಮುದ್ರಕ್ಕಿಂತ ೨೪೨೦ ಫೂಟು ಎತ್ತರವಾಗಿರುತ್ತದೆ. ಹವೆಯೂ ನೀರೂ ಆರೋಗ್ಯಕರವಾಗಿರುತ್ತವೆ. ಈ ಊರನ್ನು ಧಾರರಾಯನೆಂಬವನು ಕ್ರಿ. ಶ. ೧೪೦೩ರಲ್ಲಿ ಸ್ಥಾಪಿಸಿದನು

ಜನರು :—ಇಲ್ಲಿ ಲಿಂಗಾಯತರು, ಬ್ರಾಹ್ಮಣರು, ಮುಸಲ್ಮಾನರು, ಮರಾಠಾ ಜನರು ಹೆಚ್ಚಿಗೆ ಇದ್ದಾರೆ. ಇದು ಡಿಸ್ಟ್ರಿಕ್ಟಿನ ಹೆಡ್ ಕೋರ್ಟರು ಇರುವದರಿಂದ ಯಾವತ್ತು ಡಿಸ್ಟ್ರಿಕ್ಟಿನ ಅಧಿಕಾರಸ್ಥರು ಇಲ್ಲಿ ವಾಸಿಸುತ್ತಾರೆ. ಈ ಊರ ಹವೆಯು ಉತ್ತಮವಿರುವದರಿಂದಲೂ, ಮುಂಬಯಿ ಕರ್ನಾಟಕದ ಮುಖ್ಯಸ್ಥಳವಾಗಿರುವದರಿಂದಲೂ, ಕರ್ನಾಟಕದೊಳಗಿನ ರಿಟಾಯರ ಆದ ಅಧಿಕಾರಸ್ಥರು ಯಾವತ್ತರೂ ಇಲ್ಲಿ ಬಂಗಲೆಗಳನ್ನು ಕಟ್ಟಿಸಿ ಇಲ್ಲಿಯೇ ವಾಸವಾಗಿರುತ್ತಾರೆ. ಇಲ್ಲಿ ಮೊದಲಿನಿಂದಲೂ ಹಾಯಸ್ಕೂಲುಗಳು, ಟ್ರೇನಿಂಗ ಕಾಲೇಜುಗಳು ಇರುವದರಿಂದಲೂ, ಇತ್ತಲಾಗಿ ಕರ್ನಾಟಕ ಕಾಲೇಜು ಸ್ಥಾಪನವಾದುದರಿಂದಲೂ ಜಿಲ್ಹೆಯ ದೊಡ್ಡ ದೊಡ್ಡ ಜಹಗೀರದಾರರು, ದೇಸಾಯಿ-ದೇಶಪಾಂಡೆಯವರು ಮತ್ತು ಸಾವುಕಾರರು, ವಕೀಲರು, ಡಾಕ್ಟರರು ಬಂಗಲೆಗಳನ್ನು ಕಟ್ಟಿಸಿಕೊಂಡು ಇಲ್ಲಿಯೇ ಇರುತ್ತಾರೆ. ಸಾರಸ್ವತ ಜನರು ತಮ್ಮದೊಂದು

ಪುರವನ್ನೇ ನಿರ್ಮಿಸಿರುತ್ತಾರೆ. ಜಿಲ್ಹೆಯೊಳಗಿನ ಸಾವುಕಾರ ರಡ್ಡಿಯ ಜನರೂ, ಅಧಿಕಾರಸ್ಥರೂ ತಮ್ಮದೊಂದು ಸೊಸಾಯಿಟಿಯನ್ನು ಮಾಡಿಕೊಂಡು ಅಲ್ಲಿ ವಾಸವಾಗಿರುತ್ತಾರೆ. ಈ ಊರಲ್ಲಿ ಜನರಿಗೆ ಔಷಧೋಪಚಾರದ ದೆಸೆಯಿಂದ ಸಿವ್ಹಿಲ ಹಾಸ್ಪಿಟಲೆಂಬ ಆಸ್ಪತ್ರೆಯೊಂದು ಇರುತ್ತದೆ. ಅಲ್ಲದೆ ಬೇರೆ ಡಾಕ್ಟರ ಜನರ ಔಷಧಾಲಯಗಳು ಅನೇಕಗಳುಂಟು. ಇದಲ್ಲದೆ ದನಗಳ ಔಷಧೋಪಚಾರಕ್ಕಾಗಿ ದನದ ಆಸ್ಪತ್ರೆಯೊಂದು ಇರುವದು. ಈ ಎಲ್ಲ ಕಾರಣಗಳಿಂದ ಧಾರವಾಡವು ಮುಂಬಯಿ ಕರ್ನಾಟಕದಲ್ಲಿ ಬಹು ಸುಧಾರಿಸಿದ ಪಟ್ಟಣಗಳಲ್ಲಿ ಒಂದಾಗಿದೆ.

ಹುಬ್ಬಳ್ಳಿ :—ಇದು ಹುಬ್ಬಳ್ಳಿ ತಾಲೂಕಿನ ಮುಖ್ಯಸ್ಥಳವು. ಧಾರವಾಡ ಜಿಲ್ಹೆಯಲ್ಲಿ ಇದು ದೊಡ್ಡ ಪಟ್ಟಣವು. ಮುಂಬಯಿ ಇಲಾಖೆಯಲ್ಲಿ ಇದು ಹತ್ತನೆಯ ಪಟ್ಟಣವು. ಇದು ಧಾರವಾಡದಿಂದ ೧೨ ಮೈಲುಗಳ ಮೇಲೆ ಅದೆ. ಇದು ಹೊಸ ಹುಬ್ಬಳ್ಳಿ ಮತ್ತು ಹಳೆಯ ಹುಬ್ಬಳ್ಳಿ ಎಂಬ ಎರಡು ಭಾಗಗಳಿಂದ ಕೂಡಿ ಆಗಿರುತ್ತದೆ. ಹದಿಮೂರು ಊರುಗಳು ಕೂಡಿ ಧಾರವಾಡವು ಆಗಿರುವಂತೆಯೇ ಹುಬ್ಬಳ್ಳಿಯು ಹನ್ನೊಂದು ಹಳ್ಳಿಗಳು ಕೂಡಿ ಆಗಿರುತ್ತದೆ. (೧) ಮುದಿ

ನಾಯಕನ ಅರಳೀಕಟ್ಟಿ, (೨) ಬಮ್ಮಾಪುರ, (೩) ಅಹೋ ಬಲಾಪುರ, (೪) ವೀರಾಪುರ, (೫) ಯಲ್ಲಾಪುರ, (೬) ಮಹಿ ಜದಪುರ, (೭) ಗಣೇಶಪೇಟೆ, (೮) ಕೃಷ್ಣಾಪುರ, (೯) ಮರಿ ಯಾನ ತಿಮ್ಮಸಾಗರ, (೧೦) ಅಯೋಧ್ಯಪುರ, (೧೧) ಹಳೇ ಹುಬ್ಬಳ್ಳಿ. ಹೊಸ ಹುಬ್ಬಳ್ಳಿಯನ್ನು ಹುಬ್ಬಳ್ಳಿಯ ಸೆಟ್ಟರ ಮೂಲಪುರುಷನು ಸ್ಥಾಪಿಸಿದನೆಂದು ಹೇಳುತ್ತಾರೆ.

ಈ ಊರ ಜನಸಂಖ್ಯೆಯು ಸುಮಾರು ಎಪ್ಪತ್ತು ಸಾವಿರ ಉಂಟು. ಮೊದಲಿನಿಂದಲೂ ಇಲ್ಲಿ ನೀರಿನ ಕೊರತೆಯು ಇದ್ದೇ ಇತ್ತು. ಹಿಂದಕ್ಕೆ ಅಸ್ವಚ್ಛತೆಯಿಂದ ಛಳಿಜ್ವರಗಳ ಉಪದ್ರವವು ಬಹಳ ಹೆಚ್ಚಿಗೆ ಇತ್ತು. ಆದರೆ ಮುನಸೀಪಾ ಲಿಟಿಯವರು ಹುಬ್ಬಳ್ಳಿಯಿಂದ ಸುಮಾರು ನಾಲ್ಕು ಮೈಲಿನ ಮೇಲೆ ಇರುವ ಉಣಕಲ್ಲಿನ ಕೆರೆಯನ್ನು ದುರಸ್ತ ಮಾಡಿ ಅಲ್ಲಿಂದ ನೀರನ್ನು ನಳದಿಂದ ಹುಬ್ಬಳ್ಳಿಗೆ ಪೂರೈಸಿರುತ್ತಾರೆ. ಆದರೂ ನೀರಿನ ತೊಂದರೆಯು ತಪ್ಪಿದ್ದಲ್ಲ.

ಮುನಸೀಪಾಲಿಟಿಯು :—ಹುಬ್ಬಳ್ಳಿಯ ಮುನಸೀಪಾಲಿ ಟಿಯು ಕರ್ನಾಟಕದಲ್ಲೆಲ್ಲ ದೊಡ್ಡದಾಗಿರುತ್ತದೆ. ಮುನಸೀ ಪಾಲಿಟಿಯವರು ಜನರ ಉಪಯೋಗದ ಸಲುವಾಗಿ ಒಂದು

ಔಷಧಾಲಯವನ್ನೂ, ಲ್ಯಾಮಿಂಗಟನ್ ಹಾಯಸ್ಕೂಲ ಎಂಬ ಹಾಯಸ್ಕೂಲನ್ನೂ ಸ್ಥಾಪಿಸಿರುತ್ತಾರೆ.

ಕೈಗಾರಿಕೆ:—ಇಲ್ಲಿ ಉತ್ತಮ ಶೀರೆಗಳೂ, ಕುಬುಸದ ಖಣಗಳೂ ತಯಾರಾಗಿ ಪುಣೆ, ಮುಂಬಯಿವರೆಗೆ ವ್ಯಾಪಾರಕ್ಕಾಗಿ ಹೋಗುತ್ತವೆ. ಪುಣೆ-ಮುಂಬಯಿಗಳಲ್ಲಿ ಹುಬ್ಬಳ್ಳಿಯ ಖಣದ ಪ್ರಖ್ಯಾತಿಯು ಬಹಳವದೆ. ಹೈದರಾಬಾದ, ಬೆಂಗಳೂರ ಕಡೆಗೂ ಇಲ್ಲಿಯ ಖಣಗಳು ಈಗಲೂ ಮಾರಾಟಕ್ಕೆ ಹೋಗುತ್ತವೆ. ಆದರೆ ಇತ್ತಿತ್ತಲಾಗಿ ಬೆಂಗಳೂರ ಖಣಗಳೂ, ಪುಣೆ, ಶಹಾಪೂರ, ಟೀಕೆಕರವಾಡಿಯ ಶೀರೆ-ಖಣಗಳೂ ಸುಧಾರಿಸಿದ ನಮೂನೆಯಿಂದ ತಯಾರಾಗುವದರಿಂದ ಹುಬ್ಬಳ್ಳಿಯ ಖಣದ ಪ್ರಖ್ಯಾತಿಯು ಕಡಿಮೆಯಾಗಹತ್ತಿದೆ.

ಇಲ್ಲಿ ಉತ್ತಮ ತರಹದ ತಾಮ್ರ, ಹಿತ್ತಾಳಿ ಮತ್ತು ಕಂಚಿನ ಪಾತ್ರೆಗಳು ತಯಾರಾಗುತ್ತವೆ. ಮತ್ತು ಈ ಪಾತ್ರೆಗಳು ಕರ್ನಾಟಕದ ಯಾವತ್ತು ಭಾಗಗಳಿಗೆ ಮಾರಾಟಕ್ಕೆ ಹೋಗುತ್ತವೆ. ಆದರೆ ಇತ್ತಿತ್ತಲಾಗಿ ಸಾಂಗಲಿ, ಪುಣೆ, ನಾಸೀಕ ಮತ್ತು ಬೆಂಗಳೂರಲ್ಲಿ ಹೊಸ ಮಾದರಿಯ ಅಂದವಾದ ಪಾತ್ರೆಗಳು ತಯಾರಾಗುವದರಿಂದ ಹುಬ್ಬಳ್ಳಿಯ ಕಂಚುಗಾರರಿಗೆ ಪ್ರೋತ್ಸಾಹವು ಕಡಿಮೆಯಾಗಿದೆ.

ಈ ಊರಲ್ಲಿ ಚಿತ್ರಗಾರರು ಇರುತ್ತಾರೆ. ಅವರು ತರತರ ಹದ ಬಣ್ಣದ ಕೆಲಸಗಳನ್ನೂ, ಬಣ್ಣದ ಗೊಂಬೆ-ತೊಟ್ಟಿಲ ಗಳನ್ನೂ ತಯಾರಿಸುತ್ತಾರೆ. ಇತ್ತಿತ್ತಲಾಗಿ ಟ್ರೇಝುರಿಗಳನ್ನು ಮಾಡುವ ಕಾರಖಾನೆಯೂ ಹೊರಟಿರುತ್ತದೆ.

ಹತ್ತಿಯ ವ್ಯಾಪಾರ:—ಹತ್ತಿಯ ವ್ಯಾಪಾರವು ಬಹು ದೊಡ್ಡ ಪ್ರಮಾಣದಿಂದ ಆಗುತ್ತದೆ. ಇದು ಮುಂಬಯಿ ಕರ್ನಾಟಕದ ಹತ್ತಿಯ ಪಡಮೂಲಿ ಸ್ಥಳವಾಗಿರುತ್ತದೆ. ಇಲ್ಲಿ ಹತ್ತಿಯ ವ್ಯಾಪಾರ ಮಾಡುವ ದೊಡ್ಡ ದೊಡ್ಡ ವ್ಯಾಪಾರಸ್ಥರ ಅಂಗಡಿಗಳು ಇರುತ್ತವೆ. ಮೊದಲಿಗೆ ಹತ್ತಿಯ ವ್ಯಾಪಾರ ಮಾಡುವ ದಲಾಲರು ಲಿಂಗಾಯತರಾಗಿದ್ದರು. ಆದರೆ ಇತ್ತಿತ್ತಲಾಗಿ ಗುಜ್ಜರೂ, ಸಾರಸ್ವತರೂ ದೊಡ್ಡ ಪ್ರಮಾಣದ ಮೇಲೆ ಹತ್ತಿಯ ವ್ಯಾಪಾರ ಮಾಡುತ್ತಾರೆ, ಹತ್ತಿಯನ್ನು, ಕಾಳುಗಳನ್ನು ಬೇರೆ ಮಾಡುವ ಜಿನಿಂಗ ಫ್ಯಾಕ್ಟರಿಗಳೂ, ಅರಳೆಯನ್ನು ಗಂಟುಕಟ್ಟುವ ಪ್ರೆಸ್ಸುಗಳೂ ಅನೇಕ ಉಂಟು. ಹತ್ತಿಯನ್ನು ನೂತು ನೇಯುವ ಭಾರತ ಸ್ಪಿನಿಂಗ ಆ್ಯಂಡ ವೀವ್ಹಿಂಗ ಮಿಲ್ಸ ಎಂಬ ಕಾರಖಾನೆಯೊಂದು ಇರುವದು.

ರೇಲ್ವೆ:—ಇದು ಮದ್ರಾಸ ಮತ್ತು ಸದರ್ನ ಮರಾಠಾ ರೇಲ್ವೆಯವರ ದೊಡ್ಡ ಜಂಕ್ಶನ್ ಆಗಿರುತ್ತದೆ. ಇಲ್ಲಿಗೆ ಪುಣೆ

ಯಿಂದ ಬೆಂಗಳೂರಿಗೆ ಹೋಗುವ ಮಾರ್ಗವೂ, ವಿಜಾಪೂರ ಮಾರ್ಗವೂ, ಬಳ್ಳಾರಿಯ ಮಾರ್ಗವೂ ಕೂಡಿದ ಸಂಯುಕ್ತ ಮಾರ್ಗವೂ ಬಂದು ಶೇರಿರುತ್ತವೆ. ವಿಜಾಪೂರ ಕಡೆಯ ಮಾರ್ಗವೂ, ಬಳ್ಳಾರಿ ಕಡೆಯ ಮಾರ್ಗವೂ ಗದಗಿನಲ್ಲಿ ಸೇರಿ ಅಲ್ಲಿಂದ ಆ ಸಂಯುಕ್ತ ಮಾರ್ಗವು ಹುಬ್ಬಳ್ಳಿಗೆ ಬಂದಿರುತ್ತದೆ.

ರೇಲ್ವೆ ವರ್ಕಶಾಪ:—ಮದ್ರಾಸ ಮತ್ತು ಸದರ್ನ ಮರಾಠಾ ಕಂಪನಿಯವರು ತಮ್ಮ ರೇಲ್ವೆಗೆ ಬೇಕಾಗುವ ಸಾಮಾನುಗಳನ್ನು ತಯಾರ ಮಾಡಲಿಕ್ಕೂ, ಗಾಡಿಯ ಡಬ್ಬಿಗಳನ್ನು ತಯಾರಿಸಿ ಬಣ್ಣ ಕೊಡುವದಕ್ಕೂ, ಇಂಜನ್ನುಗಳನ್ನು ಜೋಡಿಸಲಿಕ್ಕೂ, ಕೆಟ್ಟರೆ ದುರಸ್ತ ಮಾಡಲಿಕ್ಕೂ ಒಂದು ವರ್ಕಶಾಪ ಇಟ್ಟಿರುತ್ತಾರೆ.

ಮಠಗಳು :—ಈ ಊರಲ್ಲಿ ಮೂರುಸಾವಿರ ಸ್ವಾಮಿಯವರ ಮಠ ಉಂಟು. ಇದು ಹುಬ್ಬಳ್ಳಿಯಲ್ಲಿ ಇರುವ ಲಿಂಗಾಯತರ ಬಹು ಪ್ರಸಿದ್ಧವಾದ ಮಠವು. ಈ ಮಠಕ್ಕೆ ವರ್ಷಕ್ಕೆ ಸುಮಾರು ಹತ್ತು ಸಾವಿರ ರೂಪಾಯಿ ಧರ್ಮಾದಾವ ಬರುತ್ತದೆ. ಹಳೇ ಹುಬ್ಬಳ್ಳಿಯ ಹತ್ತರ ಪ್ರಸಿದ್ಧವಾದ ಶ್ರೀ ಸಿದ್ಧಾರೂಢ ಸ್ವಾಮಿಗಳ ಮಠ ಉಂಟು. ಈ ಸ್ವಾಮಿಗಳು ನಿಜಾಮ ಇಲಾಖೆಯ ಕಲಬುರ್ಗಾ ಡಿಸ್ಟ್ರಿಕ್ಟಿನಲ್ಲಿ ಇರುವ ಬಿದ

ರಕೋಟಿಯಲ್ಲಿ ಹುಟ್ಟಿದವರೆಂದು ಹೇಳುತ್ತಾರೆ ಇವರ ತಂದೆ ತಾಯಿಗಳು ಲಿಂಗಾಯತರು. ಸ್ವಾಮಿಗಳು ಹತ್ತು-ಹನ್ನೆರಡು ವರ್ಷದವರಿದ್ದ ಕಾಲಕ್ಕೆ ಮನೆಯನ್ನು ಬಿಟ್ಟು ಹೊರಟು ಸತ್ಯವನ್ನು ಕಂಡು ಹಿಡಿಯುವದಕ್ಕಾಗಿ ದೇಶಪರ್ಯಟನ ಮಾಡಿ ಕಡೆಗೆ ತಮ್ಮ ವಯಸ್ಸಿನ ನಾಲ್ವತ್ತನೆಯ ವರ್ಷದ ಸುಮಾರಕ್ಕೆ ಹುಬ್ಬಳ್ಳಿಗೆ ಬಂದು ಈಗಿರುವ ಮಠದ ಹತ್ತರ ವಾಸ ಮಾಡಲಿಕ್ಕೆ ಹತ್ತಿದರು. ಈ ಸ್ವಾಮಿಗಳಿಗೆ ಲಿಂಗವಿರಲಿಲ್ಲ. ಇವರಿಗೆ ಯಾವತ್ತು ಜಾತಿಯ ಜನರು ನಡೆದುಕೊಳ್ಳುತ್ತಿದ್ದರು ಸ್ವಾಮಿಗಳು ವೇದಾಂತದಲ್ಲಿ ನಿಷ್ಣಾತರು. ಇವರಿಗೆ ಪುಣೆ, ಮುಂಬಯಿ, ಕಾನಪುರ ಮುಂತಾದ ಹಿಂದುಸ್ಥಾನದ ಯಾವತ್ತು ಭಾಗಗಳಲ್ಲಿ ಶಿಷ್ಯರಿದ್ದರು. ಇವರ ಶಿಷ್ಯರುಗಳಲ್ಲಿ ಸಣ್ಣವರು, ದೊಡ್ಡವರು, ಬಡವರು, ಸಾವುಕಾರರು, ಅವಿದ್ಯಾವಂತರು, ವಿದ್ಯಾವಂತರು, ಲಿಂಗಾಯತರು, ಬ್ರಾಹ್ಮಣರು, ಸಾಳಿಯವರು, ಉಳಿದ ಎಲ್ಲ ಮತದ ಜನರ ಸಮಾವೇಶವಾಗಿತ್ತು. ಈ ಮಠದಲ್ಲಿ ಮಠದಲ್ಲಿ ವರ್ಷಕ್ಕೆ ಎರಡಾವರ್ತಿ ದೊಡ್ಡ ಜಾತ್ರೆಯಾಗುತ್ತಿತ್ತು. ಸ್ವಾಮಿಗಳು ಇದೇ ವರ್ಷ ತಮ್ಮ ಆಯುಷ್ಯದ ತೊಂಬತ್ತನೆಯ ವರ್ಷ ಮೀರಿ ಸ್ವರ್ಗಸ್ಥರಾದರು. ಇವರ ನಂತರ ಆ ಮಠಕ್ಕೆ ಗುರುಸಿದ್ಧೇಶ್ವರ ಸ್ವಾಮಿಗಳೆಂಬವರು ಅಧಿಕಾರ ಹೊಂದಿರುತ್ತಾರೆ.

ಶಾಲೆಗಳು :—ಇಲ್ಲಿ ಲ್ಯಾಮಿಂಗಟನ್ ಹಾಯಸ್ಕೂಲ, ಮಿಶನ್ ಹಾಯಸ್ಕೂಲ, ನ್ಯೂ ಇಂಗ್ಲಿಷ ಸ್ಕೂಲ, ಕಾನ್ವೆಂಟ ಸ್ಕೂಲ ಎಂಬ ಹಾಯಸ್ಕೂಲಗಳು ಇರುತ್ತವೆ.

ಪಾಂಜರಪೋಲ :—ಹುಬ್ಬಳ್ಳಿಯ ಗುಜ್ಜರ ವ್ಯಾಪಾರಿಗಳು ಇಲ್ಲಿ ಒಂದು ಪ್ರಾಣಿಸಂರಕ್ಷಣಾಲಯವನ್ನು ಸ್ಥಾಪಿಸಿರುತ್ತಾರೆ. ಅಲ್ಲಿ ಕಟಕರಿಗೆ ಮಾರುವ ಆಕಳು ಮತ್ತು ಕೈಕಾಲು ಮುರಿದ ಮೂಕಪ್ರಾಣಿಗಳನ್ನು ಇಟ್ಟು ಕಾಪಾಡುತ್ತಾರೆ.

ಕಟ್ಟಡಗಳು :—ಹುಬ್ಬಳ್ಳಿಯಲ್ಲಿ ತೀರ ಭವ್ಯವಾದ ಕಟ್ಟಡಗಳು ಇಲ್ಲವಾದರೂ ಹಲಕೆಲವು ನೋಡತಕ್ಕಂತಹ ಇಮಾರತುಗಳು ಉಂಟು. ಇವುಗಳಲ್ಲಿ ಆರೂಢಸ್ವಾಮಿಯವರ ಮಠ, ಮೂರುಸಾವಿರ ಮಠ, ಮುನಿಸಿಪಲ್ ಕಚೇರಿ, ಮುನಿಸಿಪಲ್ ಆಸ್ಪತ್ರೆ, ಲ್ಯಾಮಿಂಗಟನ್ ಹಾಯಸ್ಕೂಲು, ಬ್ಯಾಹಟ್ಟಿ ಸುಬ್ಬರಾಯರ ಮನೆ, ಕೋ-ಆಪರೇಟಿವ್ಹ ದವಾಖಾನೆ ಇನ್ನುಳಿದ ಹಲಕೆಲವು ಇಮಾರತುಗಳು ನೋಡತಕ್ಕಂತಹವಿರುತ್ತವೆ.

ಬ್ಯಾಂಕುಗಳು :—ಹುಬ್ಬಳ್ಳಿಯಲ್ಲಿ ಇಂಪೀರಿಯಲ್ ಬ್ಯಾಂಕ ಆಫ್ ಇಂಡಿಯಾದ ಶಾಖೆಯೊಂದು ಸ್ಥಾಪಿಸಲ್ಪಟ್ಟದೆ. ಇದಲ್ಲದೆ ಅರ್ಬನ್ ಕೋ-ಆಪರೇಟಿವ್ಹ ಬ್ಯಾಂಕು, ಪೂನಾ

ಬ್ಯಾಂಕು, ಕರ್ನಾಟಕ ಸೆಂಟ್ರಲ್ ಬ್ಯಾಂಕಿನ ಬ್ರಾಂಚು ಮುಂತಾದ ಬ್ಯಾಂಕುಗಳೂ, ಶಾಖೆಗಳೂ ಇರುತ್ತವೆ.

ಔಷಧಾಲಯಗಳು :—ಮುನಿಸಿಪಲ್ ಹಾಸ್ಪಿಟಲ್, ಕೋ-ಆಪರೇಟಿವ್ಹ ಹಾಸ್ಪಿಟಲ್ ಇವುಗಳಲ್ಲದೆ ಬೇರೆ ಡಾಕ್ಟರ ಜನರ ಅನೇಕ ಔಷಧಾಲಯಗಳು ಉಂಟು.

ಇಲ್ಲಿ ತಾಲೂಕಿನ ಯಾವತ್ತೂ ಮುಖ್ಯಾಧಿಕಾರಿಗಳ ಆಫೀಸೂ ಉಂಟು. ಇವಲ್ಲದೆ ಇದು ದೊಡ್ಡ ಪಟ್ಟಣವಾದ್ದರಿಂದ ರೆಸಿಡೆಂಟ ಮ್ಯಾಜಿಸ್ಟ್ರೇಟ ಕೋರ್ಟ ಎಂಬುದೊಂದು ಕೋರ್ಟು ಹೆಚ್ಚಿಗೆ ಇದೆ. ಮತ್ತು ಹುಬ್ಬಳ್ಳಿ, ಬಂಕಾಪೂರ ತಾಲೂಕುಗಳ ಸಲುವಾಗಿ ಸಬ್‌ಜಜ್ಜರ ಕೋರ್ಟು ಇದೆ.

ರಾಯಲಿ ಬ್ರದರ್ಸ ಎಂಬ ಯುರೋಪಿಯನ್ನ ವ್ಯಾಪಾರಸ್ಥರ ಅಂಗಡಿಯ ಬ್ರ್ಯಾಂಚ ಒಂದು ಇಲ್ಲಿ ಅದೆ.

ಜನರು :—ಇಲ್ಲಿ ಮುಖ್ಯನಾಗಿ ಲಿಂಗಾಯತರೂ, ಬ್ರಾಹ್ಮಣರೂ, ಸಾಳೇರೂ, ಪಟ್ಟೇಗಾರರೂ, ಕಂಚುಗಾರರೂ, ಮುಸ

ಲ್ಮಾನರೂ ಉಂಟು. ಇದು ದೊಡ್ಡ ಪಟ್ಟಣವಾದರೂ ವಿದ್ಯಾಭಿರುಚಿಯು ಕಡಿಮೆ.

ಹುಬ್ಬಳ್ಳಿಯ ಊರಿಗೆ ಇಲೆಕ್ಟ್ರಿಕ್ ಕಂಪನಿಯವರು ವಿದ್ಯುತ್ತಿನ ದೀಪಗಳನ್ನು ಪೂರೈಸಿರುತ್ತಾರೆ.

ಕಲಘಟಗಿ :—ಇದು ಕಲಘಟಗಿ ತಾಲೂಕಿನ ಮುಖ್ಯ ಸ್ಥಳವು. ಧಾರವಾಡದಿಂದ ಇದು ೨೦ ಮೈಲು ದೂರದಲ್ಲಿ ಇರುತ್ತದೆ. ಇಲ್ಲಿ ಯಾವತ್ತು ತಾಲೂಕಿನಲ್ಲಿ ಇದ್ದಂತೆಯೇ ತಾಲೂಕಿನ ಅಧಿಕಾರಸ್ಥರ ಆಫೀಸುಗಳು ಉಂಟು.

ಇಲ್ಲಿ ಕಟ್ಟಿಗೆಯ ಬಣ್ಣದ ಸಾಮಾನುಗಳು ಹುಟ್ಟುತ್ತವೆ. ಈ ಊರು ಅಕ್ಕಿಯ ವ್ಯಾಪಾರದ ಸಲುವಾಗಿ ಪ್ರಸಿದ್ಧವಿರುತ್ತ ದೆ

ಶಿಗ್ಗಾವಿ :—ಇದು ಬಂಕಾಪೂರ ತಾಲೂಕಿನ ಮುಖ್ಯ ಸ್ಥಳವು. ತಾಲೂಕಿನ ಅಧಿಕಾರಸ್ಥರ ಆಫೀಸುಗಳು ಉಂಟು. ಇದು ಧಾರವಾಡದಿಂದ ೪೦ ಮೈಲು ದೂರದಲ್ಲಿ ಅದೆ. ಈ ಊರು ಎಲೆದೋಟಗಳಿಗೆ ಪ್ರಸಿದ್ಧವಿರುತ್ತದೆ ಬಂಕಾಪುರವು ಮೊದಲಿಗೆ ತಾಲೂಕಿನ ಮುಖ್ಯ ಸ್ಥಳವಾದುದರಿಂದ ಬಂಕಾಪೂರ ತಾಲೂಕು ಎಂದು ಅನ್ನುವ ರೂಢಿಯದೆ.

ಹಾವೇರಿ :—ಇದು ಹಾವೇರಿ ಅಥವಾ ಕರ್ಜಗಿ ತಾಲೂಕಿನ ಮುಖ್ಯ ಸ್ಥಳವು ಕರ್ಜಗಿಯು ಮೊದಲಿಗೆ ತಾಲೂಕಿನ ಮುಖ್ಯ ಸ್ಥಳವಿದ್ದದರಿಂದ ಕರ್ಜಗಿ ತಾಲೂಕು ಎಂಬ ರೂಢಿಯು ಇನ್ನೂ ಇರುತ್ತದೆ. ತಾಲೂಕಿನ ಯಾವತ್ತು ಆಫೀಸುಗಳು ಇರುತ್ತವೆ. ಇಲ್ಲಿ ಮುನಸೂಫ ಕೋರ್ಟು ಉಂಟು. ಇಲ್ಲಿ ಯಾಲಕ್ಕಿಗಳ ವ್ಯಾಪಾರವು ಬಹಳವಾಗುತ್ತದೆ ಇಲ್ಲಿ ಯಾಲಕ್ಕಿಯನ್ನು ತೊಳೆದು ತಯಾರ ಮಾಡಲಿಕ್ಕೆ ಉಪಯೋಗದ ಒಂದು ಭಾವಿಯುಂಟು. ಇಲ್ಲಿ ಒಂದು ಕೆರೆ ಇರುತ್ತದೆ; ಅದು ತಕ್ಕಮಟ್ಟಿಗೆ ದೊಡ್ಡದಿರುತ್ತದೆ.

ಹಾನಗಲ್ಲ :—ಇದು ಹಾನಗಲ್ಲ ತಾಲೂಕಿನ ಮುಖ್ಯ ಸ್ಥಳವು ತಾಲೂಕಿನಲ್ಲಿ ಇರುವ ಯಾವತ್ತು ಅಧಿಕಾರಸ್ಥರ ಆಫೀಸುಗಳು ಉಂಟು. ಜಕ್ಕಣಾಚಾರ್ಯರು ಕಟ್ಟಿದ ತಾರಕೇಶ್ವರ ದೇವಾಲಯವು ಬಹು ಪ್ರಸಿದ್ಧವದೆ. ಊರ ಪಶ್ಚಿಮಕ್ಕೆ ಒಂದು ಸಣ್ಣ ದಿನ್ನೆಯಿದೆ. ಅದಕ್ಕೆ ಕುಂತೀ ದಿಬ್ಬವೆಂಬ ಹೆಸರು. ಇದು ಪಾಂಡವರ ತಾಯಿಯಾದ ಕುಂತೀದೇವಿಯು ಕೇರಿದ ಜೋಳದ ಹೊಟ್ಟನಿಂದ ಆಗಿರುತ್ತದೆಂದು ಹೇಳುತ್ತಾರೆ. ಈ ಊರಿಗೆ ಮತ್ಸ್ಯಪುರವೆಂದು ಅನ್ನುತ್ತಿದ್ದರೆಂದೂ, ವಿರಾಟನೆಂಬ ಅರಸನು ಇಲ್ಲಿಯೇ ಆಳುತ್ತಿದ್ದನೆಂದೂ ದಂತಕಥೆಯುಂಟು

ರಾಣೇಬೆನ್ನೂರ:- ಇದು ರಾಣೇಬೆನ್ನೂರ ತಾಲೂಕಿನ ಮುಖ್ಯ ಸ್ಥಳವು. ಇಲ್ಲಿ ಎಲ್ಲ ತಾಲೂಕಾ ಆಫೀಸುಗಳುಂಟು. ಇಲ್ಲಿಯ ನೇಕಾರರು ಬಹು ಪ್ರಸಿದ್ಧರಿರುತ್ತಾರೆ. ಇಲ್ಲಿ ಉತ್ತಮವಾದ ಶೀರೆಗಳೂ ಮತ್ತು ಧೋತರಗಳೂ ಹುಟ್ಟುತ್ತವೆ. ಈ ಊರ ದಕ್ಷಿಣಕ್ಕೆ ಚೇಳಿನ ದಿಬ್ಬವೆಂಬುದೊಂದು ಸಣ್ಣ ದಿನ್ನೆಯದೆ. ಅಲ್ಲಿ ಲಕ್ಷಾಂತರ ಚೇಳುಗಳು ಇರುತ್ತವೆಂದೂ, ಅವು ಯಾರನ್ನು ಕಡಿಯುವದಿಲ್ಲವೆಂದೂ ಹೇಳುತ್ತಾರೆ.

ಹಿರೇಕೇರೂರ:—ಈ ತಾಲೂಕಿಗೆ ಕೋಡ ತಾಲೂಕ ಎಂದು ಹೆಸರು. ಕೋಡವು ಮೊದಲು ಈ ತಾಲೂಕಿನ ಮುಖ್ಯ ಸ್ಥಳವಾಗಿತ್ತೆಂದು ಹೇಳುತ್ತಾರೆ. ಹಿರೇಕೇರೂರು ಈ ತಾಲೂಕಿನ ಮುಖ್ಯ ಸ್ಥಳವಾಗಿರುತ್ತದೆ. ಇಲ್ಲಿ ತಾಲೂಕಿನಲ್ಲಿ ಇರತಕ್ಕ ಯಾವತ್ತು ಅಧಿಕಾರಸ್ಥರ ಆಫೀಸುಗಳು ಇರುತ್ತವೆ.

ನವಲಗುಂದ:—ಇದು ನವಲಗುಂದ ತಾಲೂಕಿನ ಮುಖ್ಯ ಸ್ಥಳವು. ಇಲ್ಲಿ ತಾಲೂಕಿನ ಯಾವತ್ತು ಅಧಿಕಾರಸ್ಥರ ಆಫೀಸುಗಳು ಇರುತ್ತವೆ. ಮೊದಲು ಇದು ಶಿರಸಂಗಿ ದೇಸಾಯರ ಗ್ರಾಮವು. ಈ ಊರಲ್ಲಿ ದನಗಳ ವ್ಯಾಪಾರವು ಬಹಳವಾಗುತ್ತದೆ. ಬಣ್ಣದ ಗೊಂಬೆ, ತೊಟ್ಟಿಲ ಇತ್ಯಾದಿ ಕಟ್ಟಿಗೆಯ ಸಾಮಾನುಗಳು ತಯಾರಾಗುತ್ತವೆ. ಇಲ್ಲಿಯ

ಜಮುಖಾನೆಗಳು ಬಹು ಪ್ರಸಿದ್ಧವಾಗಿರುತ್ತವೆ. ಇಲ್ಲಿ ಗಣಪತಿಯ ದೊಡ್ಡ ಜಾತ್ರೆಯಾಗುತ್ತದೆ.

ರೋಣ :—ಇದು ರೋಣ ತಾಲೂಕಿನ ಮುಖ್ಯ ಸ್ಥಳವು. ತಾಲೂಕಿನಲ್ಲಿರುವ ಕಚೇರಿ, ಆಸ್ಪತ್ರಿ ವಗೈರೆ ಯಾವತ್ತು ಇಲ್ಲಿ ಉಂಟು. ಇದಕ್ಕೆ ದ್ರೋಣಪುರವೆಂಬುದು ಮೊದಲಿನ ಹೆಸರು. ಕೌರವ-ಪಾಂಡವರಿಗೆ ಧನುರ್ವಿದ್ಯಾಭ್ಯಾಸ ಮಾಡಿಸಿದ ದ್ರೋಣಾಚಾರ್ಯರು ಇಲ್ಲಿ ಇರುತ್ತಿದ್ದರೆಂದು ದಂತಕಥೆಯಿದೆ. ಇಲ್ಲಿ ದ್ರೋಣಾಚಾರ್ಯರ ಗುಡಿಯಿದೆ. ಕಾಳು, ಉರುಟು ಬಟ್ಟೆಗಳ ವ್ಯಾಪಾರವು ಬಹಳವಾಗುತ್ತದೆ.

ಗದಗ :— ಇದು ಗದಗ ತಾಲೂಕಿನ ಮುಖ್ಯ ಸ್ಥಳವು. ತಾಲೂಕಿನಲ್ಲಿ ಸಾಧಾರಣವಾಗಿ ಇರುವ ಕಚೇರಿ, ಪೋಷ್ಟು, ದವಾಖಾನೆ, ಬ್ಯಾಂಕು ಮುಂತಾದ ಯಾವತ್ತು ಆಫೀಸುಗಳು ಇರುವವಲ್ಲದೆ ಮುನಸೂಫರ ಕೋರ್ಟು ಸಹ ಉಂಟು. ಇಲ್ಲಿ ಅರಳೆಯ ವ್ಯಾಪಾರವು ಬಹಳವಾಗುತ್ತದೆ. ಕಾರಣ ಜಿನಿಂಗ ಫ್ಯಾಕ್ಟರಿಗಳೂ, ಅರಳೀ ಗಂಟು ಕಟ್ಟುವ ಪ್ರೆಸ್ಸುಗಳೂ, ಒಂದು ನೂಲುವ ದೊಡ್ಡ ಗಿರಣಿಯೂ ಇರುತ್ತವೆ. ಜಕ್ಕಣಾಚಾರ್ಯರು ಕಟ್ಟಿದ ವೀರನಾರಾಯಣ, ತ್ರಿಕೂಟೇಶ್ವರ, ಸರಸ್ವತಿ, ಸೋಮೇಶ್ವರ ಎಂಬ ಪ್ರಸಿದ್ಧ ದೇವಾಲಯಗಳಿವೆ.

ಲಿಂಗಾಯತರ ಬಹು ಪ್ರಸಿದ್ಧವಾದ ತೋಂಟದ ಸ್ವಾಮಿಗಳ ಮಠವದೆ ಇಲ್ಲಿ ಉತ್ತಮ ಶೀರೆಗಳು ಹುಟ್ಟುತ್ತವೆ; ಮತ್ತು ಗದಗಿನ ಶೀರೆಗಳ ಪ್ರಖ್ಯಾತಿಯೂ ಬಹಳ ಉಂಟು ಇಲ್ಲಿ ಊರಲ್ಲೆಲ್ಲ ಇಲೆಕ್‌ಟ್ರಿಕ್ (ವಿದ್ಯುತ್ತಿನ) ದೀಪಗಳುಂಟು

## ಪೇಠಾದ ಮುಖ್ಯ ಸ್ಥಳಗಳು.

ನರಗುಂದ :—ಇದು ನವಲಗುಂದ ತಾಲೂಕಿನಲ್ಲಿ ಅದೆ. ಇದು ನರಗುಂದ ಪೇಠೆಯ ಮುಖ್ಯ ಸ್ಥಳವು ಇಲ್ಲಿ ಮಹಾಲಕರಿಯು ಇರುತ್ತಾನೆ ಇಲ್ಲಿ ವೆಂಕಟರಮಣನ ಬಹು ಪ್ರಸಿದ್ಧವಾದ ದೇವಸ್ಥಾನ ಉಂಟು ಈ ಊರನ್ನು ಛತ್ರಪತಿ ಶಿವಾಜಿ ಮಹಾರಾಜನು ಕ್ರಿ ಶ ೧೬೭೪ರಲ್ಲಿ ಕಟ್ಟಿಸಿದನು. ಇಲ್ಲಿ ಒಂದು ಸಂಸ್ಥಾನಿಕ ಮನೆತನದವರು ಇರುತ್ತಿದ್ದರು. ಕ್ರಿ. ಶ ೧೮೫೭ರಲ್ಲಿ ಆದ ಭಯಂಕರವಾದ ಬಂಡಾಯದಲ್ಲಿ ಈ ಸಂಸ್ಥಾನಿಕರ ಮನೆತನದವನೊಬ್ಬನಾದ ನಾನಾಸಾಹೇಬನೆಂಬವನು ಬಂಡಾಯದಲ್ಲಿ ಸೇರಿದ್ದರಿಂದ ಇಂಗ್ಲೀಷರು ಅವನನ್ನು ಹಿಡಿದು ಕ್ರಿ. ಶ ೧೮೫೮ರಲ್ಲಿ ಬೆಳಗಾವಿಯಲ್ಲಿ ಗಲ್ಲಿಗೆ ಏರಿಸಿದರು ಈ ಬಂಡಾಯಕ್ಕೆ "ನರಗುಂದದ ಬಂಡಾಯ" ವೆಂಬ ಹೆಸರು.

ಮುಂಡರಗಿ :—ಇದು ಗದಗ ತಾಲೂಕಿನಲ್ಲಿ ಅದೆ. ಆದರೆ ಇದು ಮುಂಡರಗಿ ಪೇಠೆಯ ಮುಖ್ಯ ಸ್ಥಳವು. ಇಲ್ಲಿ ಮಹಾಲಕರಿಯು ಇರುತ್ತಾನೆ. ಇಲ್ಲಿ ಕಿರಾಣಿ ವ್ಯಾಪಾರವು ಬಹಳವಾಗುತ್ತದೆ. ಈ ಊರಲ್ಲಿ ಮೊಂಡಗೈ ಭೀಮರಾಯನೆಂಬವನು ಇರುತ್ತಿದ್ದನು, ಆತನು ಕ್ರಿ. ಶ. ೧೮೫೭ರಲ್ಲಿಯ ಬಂಡಾಯದಲ್ಲಿ ಸೇರಿದ್ದರಿಂದ ಈ ಸಂಸ್ಥಾನವನ್ನು ಇಂಗ್ಲೀಷರು ತಮ್ಮ ಕೈಯ್ಯಲ್ಲಿ ತೆಗೆದುಕೊಂಡರು.

---

## ೪ನೆಯ ಪ್ರಕರಣ.

### ರೇಲ್ವೆಗಳ ಮಾರ್ಗ.

ಪುಣೆ-ಬೆಂಗಳೂರ ಮಾರ್ಗ :—ಪುಣೆಯಿಂದ ಬೆಂಗಳೂರಿಗೆ ಹೋಗಿರುವ ಮುಖ್ಯ ಮಾರ್ಗವು ಬೆಳಗಾವಿಯ ಮೇಲಿಂದ ಹಾಯ್ದು, ಬೆಳಗಾವಿ ಜಿಲ್ಹೆಯೊಳಗಿಂದ ಧಾರವಾಡ ಜಿಲ್ಹೆಯಲ್ಲಿ ಸೇರುತ್ತದೆ. ಮೊದಲು ಧಾರವಾಡ ಜಿಲ್ಹೆಯ ಅಳಣಾವರದ ಮೇಲಿಂದ ಧಾರವಾಡಕ್ಕೆ, ಅಲ್ಲಿಂದ ಹುಬ್ಬಳ್ಳಿ, ಹುಬ್ಬ

ಳ್ಳಿಯಿಂದ ಹಾವೇರಿ, ಅಲ್ಲಿಂದ ರಾಣೇಬೆನ್ನೂರು, ರಾಣೇಬೆನ್ನೂರಿಂದ ಮೈಸೂರ ಸೀಮೆಯಲ್ಲಿಯ ಹರಿಹರದ ಮೇಲಿಂದ ಹಾಗೆಯೇ ನೆಟ್ಟಗೆ ಬೆಂಗಳೂರಿಗೆ ಹೋಗಿರುತ್ತದೆ. ಈ ಮಾರ್ಗದ ಮೇಲೆ ಅಳಣಾವರದಿಂದ ಹರಿಹರದವರೆಗೆ ಇರುವ ಯಾವತ್ತು ಸ್ಟೇಶನ್ನುಗಳನ್ನು ಅನುಕ್ರಮವಾಗಿ ಕೆಳಗೆ ಕೊಟ್ಟದೆ ಅಳಣಾವರ, ಕಂಬಾರಗಣವಿ, ಮುಗದ, ಧಾರವಾಡ, ಅಮರಗೋಳ, ಹುಬ್ಬಳ್ಳಿ, ಕುಂದಗೋಳ, ಸಂಶಿ, ಗುಡಗೇರಿ, ಯಲವಿಗಿ, ಸವಣೂರು, ಕರ್ಜಗಿ, ಹಾವೇರಿ, ಬ್ಯಾಡಿಗಿ, ದೇವರಗುಡ್ಡ, ರಾಣೇಬೆನ್ನೂರು, ಚಳಗೇರಿ, ಹರಿಹರ ಈ ಮಾರ್ಗವು ಪುಣೆಯಿಂದ ಮುಂದೆ ಮುಂಬಯಿಗೂ, ಬೆಂಗಳೂರಿಂದ ಮುಂದೆ ಮೈಸೂರಿಗೂ ಹೋಗಿರುತ್ತದೆ.

ಹುಬ್ಬಳ್ಳಿ-ಗುಂತಕಲ್ಲ ಮಾರ್ಗ :--ಇದು ಹುಬ್ಬಳ್ಳಿಯಿಂದ ಹೊರಟು ಗದಗಿನ ಮೇಲಿಂದ ಬಳ್ಳಾರಿಯ ಮೇಲೆ ಹಾಯ್ದು ಗುಂತಕಲ್ಲಿಗೆ ಹೋಗಿರುತ್ತದೆ. ಅಲ್ಲಿ ಪುಣೆಯಿಂದ ಮದ್ರಾಸಕ್ಕೆ ಹೋಗುವ ದೊಡ್ಡ ಮಾರ್ಗಕ್ಕೆ ಕೂಡಿರುತ್ತದೆ. ಈ ಮಾರ್ಗವು ಗುಂತಕಲ್ಲಿನಿಂದ ದ್ರೋಣಾಚಲದ ಮೇಲೆ ಹಾಯ್ದು ಹೈದರಾಬಾದಕ್ಕೆ ಹೋಗಿದೆ. ಈ ರಸ್ತೆಯ ಮೇಲೆ ಧಾರವಾಡ ಜಿಲ್ಲೆಯಲ್ಲಿ ಕೆಳಗೆ ಬರೆದ ಸ್ಟೇಶನ್ನುಗಳು ಅವೆ. ಅವು ಅನು

ಕ್ರಮವಾಗಿ ಹುಬ್ಬಳ್ಳಿ, ಕುಸುಗಲ್ಲ, ದುಂದೂರು, ಅಣ್ಣಿಗೇರಿ, ಹುಲಕೋಟಿ, ಗದಗ, ಕಣಗಿನಹಾಳ ಈ ಮಾರ್ಗವು ಮುಂದೆ ಬಳ್ಳಾರಿಯ ಮೇಲಿಂದ ಗುಂತಕಲ್ಲಿಗೆ ಹೋಗಿದೆ.

ಹುಬ್ಬಳ್ಳಿ-ಹುಟಗಿ ಮಾರ್ಗವು :—ಹುಬ್ಬಳ್ಳಿಯಿಂದ ಗದಗಿನವರೆಗೆ ಈ ಮಾರ್ಗವೂ, ಗುಂತಕಲ್ ಮಾರ್ಗವೂ ಒಂದೇ ಆಗಿರುತ್ತದೆ. ಗದಗಿನಿಂದ ಮುಂದೆ ಈ ಮಾರ್ಗವು ಬೇರೆಯಾಗಿ ಬಾಗಲಕೋಟಿ-ವಿಜಾಪುರಗಳ ಮೇಲಿಂದ ಹುಟಗಿಗೆ ಹೋಗಿ ಅಲ್ಲಿ ಪುಣೆಯಿಂದ ಮದ್ರಾಸಿಗೆ ಹೋಗುವ ದೊಡ್ಡ ಮಾರ್ಗಕ್ಕೆ ಕೂಡಿದೆ. ಈ ಮಾರ್ಗದ ಮೇಲೆ ಧಾರವಾಡ ಜಿಲ್ಹೆಯಲ್ಲಿ ಅನುಕ್ರಮವಾಗಿ ಕೆಳಗೆ ಕಾಣಿಸಿದ ಸ್ಟೇಶನ್ನಗಳು ಅವೆ. ಹುಬ್ಬಳ್ಳಿ, ಕುಸೂಗಲ್ಲ, ದುಂದೂರು, ಅಣ್ಣಿಗೇರಿ, ಹುಲಕೋಟಿ, ಗದಗ, ಹೊಂಬಳ, ಬಳಗಾನೂರು, ಬೆಳವಣಿಕಿ ಆಲೂರು.

## ಲೈನ ಮಾರ್ಗಗಳು.

ಪುಣೆ-ಬೆಂಗಳೂರ ಮಾರ್ಗ :—ಇದು ಪುಣೆಯಿಂದ ಹೊರಟು ಬೆಳಗಾವಿಯ ಮೇಲಿಂದ ಧಾರವಾಡ ಜಿಲ್ಹೆಯಲ್ಲಿ ತೇಗೂರಿನ ಹತ್ತರ ಧಾರವಾಡ ಜಿಲ್ಹೆಯನ್ನು ಸೇರುತ್ತದೆ. ಅಲ್ಲಿಂದ

ಧಾರವಾಡ, ಹುಬ್ಬಳ್ಳಿ, ಶಿಗ್ಗಾವಿ, ಬಂಕಾಪುರ, ಹಾವೇರಿ, ರಾಣೇಬೆನ್ನೂರುಗಳ ಮೇಲಿಂದ ಮೈಸೂರ ಸೀಮೆಯಲ್ಲಿ ಸೇರುತ್ತದೆ. ಅಲ್ಲಿಂದ ಹರಿಹರದಮೇಲಿಂದ ನೆಟ್ಟಗೆ ಬೆಂಗಳೂರವರೆಗೆ ಹೋಗುತ್ತದೆ. ಈ ಮಾರ್ಗವು ದಂಡಿನ ಸಲುವಾಗಿ ಮುಖ್ಯವಾಗಿ ಉಪಯೋಗದಲ್ಲಿ ಇದ್ದುದರಿಂದ ಸರಕಾರದವರು ಈ ಮಾರ್ಗದ ವ್ಯವಸ್ಥೆಯನ್ನು ಚನ್ನಾಗಿ ಇಟ್ಟಿರುತ್ತಾರೆ. ಧಾರವಾಡ ಜಿಲ್ಹೆಯ ಯಾವತ್ತು ಲೈನ ಮಾರ್ಗಗಳು ಧಾರವಾಡ ಡಿಸ್ಟ್ರಿಕ್ಟ ಬೋರ್ಡಿನ ಆಡಳಿತಕ್ಕೆ ಸೇರಿದರೂ ಈ ಮಾರ್ಗವನ್ನು ಮಾತ್ರ ತಮ್ಮ ಕಡೆಗೆ ಇಟ್ಟುಕೊಂಡಿರುತ್ತಾರೆ.

ಧಾರವಾಡ-ಕಲಘಟಗಿ ಮಾರ್ಗ:—ಇದು ಧಾರವಾಡದಿಂದ ಹೊರಟು ಮುತ್ತಗಿ-ಹುಲ್ಲಂಬಿಗಳ ಮೇಲಿಂದ ಕಲಘಟಗಿಗೆ ಹೋಗಿ ಅಲ್ಲಿಂದ ಮುಂದಕ್ಕೆ ಯಲ್ಲಾಪುರದ ಕಡೆಗೆ ಹೋಗಿದೆ.

ಧಾರವಾಡ-ಬಳ್ಳಾರಿ ಮಾರ್ಗ:—ಈ ಮಾರ್ಗವು ಧಾರವಾಡದಿಂದ ಹೊರಟು ಬ್ಯಾಹಟ್ಟಿಯ ಮೇಲಿಂದ ಅಣ್ಣಿಗೇರಿ ಅಲ್ಲಿಂದ ಗದಗು. ಗದಗಿನಿಂದ ಮುಂದೆ ಡಂಬಳದ ಮೇಲಿಂದ ಬಳ್ಳಾರಿಗೆ ಹೋಗಿದೆ

ಯಲ್ಲಾಪುರ-ವಿಜಾಪುರ ಮಾರ್ಗ :—ಇದು ಯಲ್ಲಾಪುರ ದಿಂದ ಹೊರಟು ಕಲಘಟಗಿಯ ಮೇಲಿಂದ ಹುಬ್ಬಳ್ಳಿಗೆ ಮುಟ್ಟಿ ಅಲ್ಲಿಂದ ಬ್ಯಾಹಟ್ಟಿಯ ಮೇಲೆ ಹಾಯ್ದು ನರಗುಂದಕ್ಕೆ ತಲುಪಿ ಅಲ್ಲಿಂದ ಮುಂದೆ ಬಳ್ಳಾರಿಗೆ ಹೋಗಿದೆ.

ಹಾನಗಲ್ಲ-ಬಾದಾಮಿ ಮಾರ್ಗ :—ಇದು ಹಾನಗಲ್ಲಿನಿಂದ ಹೊರಟು ಬಂಕಾಪುರ ಮೇಲಿಂದ ಸವಣೂರಿಗೆ ಮುಟ್ಟಿ ಅಲ್ಲಿಂದ ಗದಗಿಗೆ ಹೋಗಿ, ಗದಗಿನಿಂದ ಮುಂದೆ ಕೋಟುಮುಚಗಿ, ರೋಣಗಳ ಮೇಲಿಂದ ಬಾದಾಮಿಗೆ ಹೋಗಿದೆ.

ಹರಿಹರ-ಕುಮಠಾ ಮಾರ್ಗ :—ಇದು ಹರಿಹರದಿಂದ ಹೊರಟು ಹಲಗೇರಿ, ಕೋಡ, ಹಾವಸಭಾವಿ, ತಿಳವಳ್ಳಿಗಳ ಮೇಲಿಂದ ಮುಂದೆ ಕುಮಠಾಕ್ಕೆ ಹೋಗುತ್ತದೆ. ಮೊದಲು ಇದು ಬಹು ಪ್ರಸಿದ್ಧವಾದ ಮಾರ್ಗವು. ಕುಮಠೆಯು ಭರ ಭರಾಟಿಯಲ್ಲಿ ಇದ್ದಾಗ ಈ ಮಾರ್ಗದಿಂದ ಹತ್ತಿ ಮತ್ತು ಮೆಣ ಸಿನ ಕಾಯಿಗಳು ಮಾರಾಟಕ್ಕಾಗಿ ಕುಮಠೆಗೆ ಹೋಗುತ್ತಿದ್ದವು. ಕುಮಠೆಯಿಂದ ಉಪ್ಪು, ಕರ್ಜೂರ, ಗೇರ (ಕೇರ) ಬೀಜ ಮತ್ತು ಬೆತ್ತದ ಪುಟ್ಟಿ ಮುಂತಾದ ಸಾಮಾನುಗಳು ಈ ಕಡೆಗೆ ಮಾರಾಟಕ್ಕೆ ಬರುತ್ತಿದ್ದವು.

ಈ ಮುಖ್ಯವಾದ ಮಾರ್ಗಗಳಲ್ಲದೆ ಜಿಲ್ಹೆಯಲ್ಲೆಲ್ಲ ಸಣ್ಣ ಸಣ್ಣ ಬೇರೆ ಮಾರ್ಗಗಳು ಅವೆ.

ಮೋಟಾರ ಸರ್ವಿಸ:—ಈಗ ನಾಲ್ಕಾರು ವರ್ಷಗಳಲ್ಲಿ ಮೋಟಾರ ಸರ್ವೀಸುಗಳು ಹೆಚ್ಚಾಗಿವೆ. ಹುಬ್ಬಳ್ಳಿ-ಧಾರವಾಡ ಗಳ ನಡುವೆ ಯಾವಾಗಲೂ ಮೋಟಾರಗಳು ಓಡಾಡುತ್ತವೆ. ಧಾರವಾಡ-ಬೆಳಗಾವಿಗಳ ನಡುವೆಯೂ ಮೋಟಾರ ಸರ್ವೀಸು ಅದೆ. ಧಾರವಾಡ-ಕಲಘಟಗಿಗಳ ನಡುವೆ ಮೋಟಾರಗಳು ಓಡಾಡುತ್ತವೆ. ಧಾರವಾಡದಿಂದ ನವಲಗುಂದ-ನರಗುಂದಕ್ಕೆ ಮೋಟಾರ ಸರ್ವೀಸು ಸುರುವಾಗಿದೆ. ಧಾರವಾಡದಿಂದ ಕಾರವಾರಕ್ಕೂ, ಗೋಕಾಕಕ್ಕೂ ಸುರು ಅದೆ.

ಹುಬ್ಬಳ್ಳಿಯಿಂದ ಹಾವೇರಿಗೂ, ಹಾನಗಲ್ಲಿಗೂ, ಶಿರ್ಶಿಗೂ ಮತ್ತು ಗದಗಿಗೂ ಮೋಟಾರಗಳು ಓಡಾಡುತ್ತವೆ. ಇದು ಅಲ್ಲದೆ ಧಾರವಾಡದಿಂದ ಹರಿಹರದವರೆಗೆ ಇರುವ ಮುಖ್ಯ ಮುಖ್ಯ ಸ್ಟೇಶನ್ನುಗಳಿಂದ ಜಿಲ್ಹೆಯ ಮುಖ್ಯ ಮುಖ್ಯ ಸ್ಥಳಗಳಿಗೆ ಮೋಟಾರ ಸರ್ವೀಸು ಉಂಟು.

ಹೊಳೆಗಳು :—ಧಾರವಾಡ ಜಿಲ್ಹೆಯಲ್ಲಿ ತುಂಗಭದ್ರಾ, ಕುಮುದ್ವತಿ, ವರದಾ, ಧರ್ಮಾ, ಮಲಪ್ರಭಾ, ಶಾಲ್ಮಲಾ,

ಮಲಾಪಹಾರಿ ಎಂಬ ನದಿಗಳು ಉಂಟು. ತುಂಗಭದ್ರಾ ನದಿಯು ಎಲ್ಲಕ್ಕೂ ದೊಡ್ಡ ನದಿಯು ಇದಕ್ಕೆ ಹಿರೇಹೊಳೆಯೆಂದೂ ಜನರು ಕರೆಯುತ್ತಾರೆ.

ಹೊಳೆಯ ಪೂಲುಗಳು :—ರೇಲ್ವೆಯೂ, ಲೈನಮಾರ್ಗಗಳೂ ಹೊಳೆಗಳ ಮೇಲೆ ಹಾಯ್ದು ಹೋಗಲಿಕ್ಕೆ ಪೂಲುಗಳನ್ನು ಕಟ್ಟಿರುತ್ತಾರೆ. ಇಂತಹ ಪೂಲುಗಳು ಹರಿಹರದ ಹತ್ತರ ಮತ್ತು ಕರ್ಜಗಿ ತಾಲೂಕ ಸಂಗೂರ ಹತ್ತರ ಆವೆ. ಅವು ನೋಡತಕ್ಕಂತಹವಿರುತ್ತವೆ.

ಹಳ್ಳಗಳು :—ಬೆಣ್ಣೀಹಳ್ಳ, ಹಿರೇಹಳ್ಳ, ಬೀಡತಿಹಳ್ಳಗಳೆಂಬ ಮೂರು ಮುಖ್ಯ ಹಳ್ಳಗಳು ಉಂಟು. ಬೆಣ್ಣಿಹಳ್ಳದೊಳಗೆ ಕೆಲವು ಕಡೆಗೆ ನೆಲವು ಬೆಣ್ಣೆಯಂತೆ ಮಿದುವಾಗಿರುವದರಿಂದ ಇದಕ್ಕೆ ಬೆಣ್ಣಿಹಳ್ಳವೆಂಬ ಹೆಸರು ಬಂದದೆ.

ಕೆರೆಗಳು :—ಮದಗಮಾಸೂರ ಕೆರೆ. ಇದನ್ನು ವಿಜಯನಗರದ ಅರಸರು ಕಟ್ಟಿಸಿದರು. ಈ ಸರೋವರಕ್ಕೆ ಕುಮದ್ವತಿ ನದಿಯು ಕೂಡಿ ಅಲ್ಲಿಂದ ಮುಂದೆ ಹರಿಯುವದು. ಈ ಕೆರೆಯಿಂದ ಎರಡು ಕಾಲುವೆಗಳನ್ನು ತೆಗೆದು ನಾಲ್ಕೈದು ಮೈಲು ದೂರ ಒಯ್ದಿರುತ್ತಾರೆ. ಗದಗ ತಾಲೂಕಿನಲ್ಲಿ

ಡಂಬಳ ಕೆರೆಯು ದೊಡ್ಡದು. ಧಾರವಾಡ, ಬಂಕಾಪೂರ, ಹಾವೇರಿ ತಾಲೂಕುಗಳಲ್ಲಿ ಅನುಕ್ರಮವಾಗಿ ಮುಗದ ಕೆರೆ, ನಾಗನೂರ ಕೆರೆ, ಹಾವೇರಿ ಕೆರೆಗಳು ತಕ್ಕಮಟ್ಟಿಗೆ ದೊಡ್ಡವಿರುತ್ತವೆ. ಹುಬ್ಬಳ್ಳಿ ಮುನಸೀಪಾಲಿಟಿಯವರು ಕಟ್ಟಿಸಿದ ಉಣಕಲ್ಲ ಕೆರೆಯೂ, ಧಾರವಾಡ ಮುನಸೀಪಾಲಿಟಿಯವರು ಕಟ್ಟಿಸಿದ ಕೆಲಗೇರಿ ಕೆರೆಯೂ ದೊಡ್ಡವಿರುತ್ತವೆ. ಈ ಕೆರೆಗಳ ನೀರು ಹುಬ್ಬಳ್ಳಿಗೂ ಮತ್ತು ಧಾರವಾಡಕ್ಕೂ ಕುಡಿಲಿಕ್ಕೆ ನಳಗಳನ್ನು ಹಾಕಿ ಒಯ್ದಿರುತ್ತಾರೆ.

ಪರ್ವತಗಳೂ ಗುಡ್ಡಗಳೂ :—ಧಾರವಾಡ ತಾಲೂಕಿನಲ್ಲಿ ತೇಗೂರ ಗುಡ್ಡ ಮತ್ತು ಕ್ಯಾರಕೊಪ್ಪದ ಗುಡ್ಡಗಳ ಸಾಲುಗಳು ಉಂಟು. ಇವು ೧೫೦ರಿಂದ ೩೦೦ ಫೂಟುಗಳ ಎತ್ತರವಿರುತ್ತವೆ. ಕಲಘಟಗಿ ಮತ್ತು ಹುಬ್ಬಳ್ಳಿ ತಾಲೂಕುಗಳ ಮಧ್ಯದಲ್ಲಿ ಬೂದನಗುಡ್ಡದ ಸಾಲು ಇರುತ್ತದೆ. ಇದು ಎಂಟು ಮೈಲು ಉದ್ದವಾಗಿಯೂ, ಒಂದು ಮೈಲು ಅಗಲವಾಗಿಯೂ ಹಬ್ಬಿರುತ್ತದೆ. ಇದರ ಎತ್ತರವು ಸುಮಾರು ೫೦೦ ಫೂಟು ಉಂಟು. ಕಲಘಟಗಿ ತಾಲೂಕಿನ ಪಶ್ಚಿಮ ಭಾಗಕ್ಕೆ ಗಣಿಗುಡ್ಡ ಉಂಟು. ಬಂಕಾಪೂರ-ಹಾನಗಲ್ಲ ತಾಲೂಕುಗ

ಳಲ್ಲಿ ಸಣ್ಣಪುಟ್ಟ ಗುಡ್ಡಗಳುಂಟು. ಕೋಡ ತಾಲೂಕಿನಲ್ಲಿ ಕಡೂರ ಗುಡ್ಡದ ಸಾಲು ಸುಮಾರು ಹದಿನಾಲ್ಕು ಮೈಲು ಉದ್ದವಾಗಿ ಹಬ್ಬಿರುತ್ತದೆ. ಇದರ ಎತ್ತರವು ೪೦೦ರಿಂದ ೬೦೦ ಫೂಟಿನವರೆಗೆ ಅದೆ. ರಾಣೇಬೆನ್ನೂರ ತಾಲೂಕಿನಲ್ಲಿ ಐರಣೀ ಗುಡ್ಡ ಉಂಟು. ಇದು ಐದು ಮೈಲು ಉದ್ದವಿದ್ದು ೨-೩ ನೂರು ಫೂಟು ಎತ್ತರವಿರುತ್ತದೆ. ಗದಗ ತಾಲೂಕಿನಲ್ಲಿ ಕಪ್ಪತಗುಡ್ಡದ ಸಾಲು ಇರುತ್ತದೆ. ಇದು ಮೂವತ್ತು ಮೈಲು ಉದ್ದವಾಗಿಯೂ ಮೂರು ಮೈಲು ಅಗಲವಾಗಿಯೂ ಹಬ್ಬಿರುತ್ತದೆ. ನವಲಗುಂದ ತಾಲೂಕಿನಲ್ಲಿ ನರಗುಂದ ಗುಡ್ಡವಿರುತ್ತದೆ. ಇದು ೮೦೦ ಫೂಟು ಎತ್ತರವಿರುತ್ತದೆ. ರೋಣ ತಾಲೂಕಿನಲ್ಲಿ ಗಜೇಂದ್ರಗಡ ಗುಡ್ಡವಿರುತ್ತದೆ.

ದೊಡ್ಡ ಊರುಗಳು :—(೧) ಧಾರವಾಡ ತಾಲೂಕಿನಲ್ಲಿ ಧಾರವಾಡ, (೨) ಹುಬ್ಬಳ್ಳಿ ತಾಲೂಕಿನಲ್ಲಿ ಹುಬ್ಬಳ್ಳಿ, (೩) ನವಲಗುಂದ ತಾಲೂಕಿನಲ್ಲಿ ನವಲಗುಂದ, ನರಗುಂದ, (೪) ರೋಣ ತಾಲೂಕಿನಲ್ಲಿ ರೋಣ, ೫) ಗದಗ ತಾಲೂಕಿನಲ್ಲಿ ಗದಗ ಮತ್ತು ಮುಂಡರಗಿ, (೬) ಹಾವೇರಿ ತಾಲೂಕಿನಲ್ಲಿ ಹಾವೇರಿ, ಕರ್ಜಗಿ, (೭) ರಾಣೇಬೆನ್ನೂರ ತಾಲೂಕಿನಲ್ಲಿ ರಾಣೇಬೆನ್ನೂರು, ಬ್ಯಾಡಗಿ, (೮) ಶಿಗ್ಗಾವಿ ತಾಲೂಕಿನಲ್ಲಿ

ಶಿಗ್ಗಾವಿ, ಬಂಕಾಪುರ, (೯) ಕಲಘಟಗಿ ತಾಲೂಕಿನಲ್ಲಿ ಕಲಘಟಗಿ ಮತ್ತು ಮಿಶ್ರಿಕೋಟಿ, (೧೦) ಹಾನಗಲ್ಲ ತಾಲೂಕಿನಲ್ಲಿ ಹಾನಗಲ್ಲು, ಆಲೂರು, (೧೧) ಕೋಡ ತಾಲೂಕಿನಲ್ಲಿ ಕೋಡ, ಹಿರೇಕೆರೂರ, ರಟ್ಟಿಹಳ್ಳಿ ಮತ್ತು ಚಿಕ್ಕೇರೂರು ಈ ಪ್ರಕಾರ ದೊಡ್ಡ ಊರುಗಳುಂಟು.

ವ್ಯಾಪಾರ ಸ್ಥಳಗಳು :—ಹುಬ್ಬಳ್ಳಿಯಲ್ಲಿ ಹತ್ತಿ, ತಾಮ್ರ, ಹಿತ್ತಾಳಿ, ಕಂಚಿನ ಪಾತ್ರೆಗಳು, ಶೇರಿ, ಕುಪ್ಪಸ, ಕಾಳುಕಡಿಗಳು ಚನ್ನಾಗಿ ಮಾರಾಟವಾಗುತ್ತವೆ. ಗದಗಿನಲ್ಲಿ ಹತ್ತಿ, ಅರಳಿ ಮತ್ತು ಶೇರಿ, ಕುಪ್ಪಸಗಳ ವ್ಯಾಪಾರವಾಗುತ್ತದೆ. ಹಾವೇರಿಯಲ್ಲಿ ಯಾಲಕ್ಕಿಗಳು ಬಂದು ತೊಳೆದ ನಂತರ ಸಿದ್ಧವಾಗಿ ದೇಶದ ಎಲ್ಲ ಕಡೆಗೂ ಮಾರಾಟಕ್ಕೆ ಹೋಗುತ್ತವೆ. ಬ್ಯಾಡಗಿಯಲ್ಲಿ ಮೆಣಸು, ಮೆಣಸಿನಕಾಯಿ, ಬೆಲ್ಲ ಇವುಗಳ ವ್ಯಾಪಾರವು ದೊಡ್ಡ ಪ್ರಮಾಣದ ಮೇಲೆ ಆಗುತ್ತದೆ.

ಕಲಘಟಗಿ, ಆಲೂರು, ಚಿಕ್ಕೇರೂರುಗಳಲ್ಲಿ ಅಕ್ಕೀ ವ್ಯಾಪಾರವು ಚನ್ನಾಗಿ ನಡೆಯುತ್ತದೆ. ಮಿಶ್ರಿಕೋಟಿಯಲ್ಲಿ ಅವಲಕ್ಕಿಯು ತಯಾರ ಆಗುವದರಿಂದ ಅವಲಕ್ಕಿಯ ವ್ಯಾಪಾರವು ಚನ್ನಾಗಿ ಆಗುತ್ತದೆ.

ಕೈಗಾರಿಕೆಯ ಒಡವೆಗಳು :—ಹುಬ್ಬಳ್ಳಿಯಲ್ಲಿ ತಾಮ್ರ, ಹಿತ್ತಾಳಿ, ಕಂಚಿನ ಸಾಮಾನುಗಳು, ಶೀರಿ, ಕುಪ್ಪಸಗಳು ಹುಟ್ಟುತ್ತವೆ. ಹೆಬಸೂರಲ್ಲಿ ಉತ್ತಮವಾದ ಗುಡಾರಗಳು, ಗದಗಬೆಟಗೇರಿಯಲ್ಲಿ ಉತ್ತಮ ಶೀರೆ ಮತ್ತು ಕುಪ್ಪಸದ ಖಣಗಳು ತಯಾರಾಗುತ್ತವೆ. ರಾಣೇಬೆನ್ನೂರು, ಹಲಗೇರಿ ಮತ್ತು ತುಮ್ಮಿನಕಟ್ಟಿಗಳಲ್ಲಿ ಶೀರೆಗಳೂ, ಉರುಟ ಧೋತರ, ಪಂಜೆಗಳೂ ತಯಾರಾಗುತ್ತವೆ. ಐರಣಿ, ಕುಡುಪಲಿ, ನೆಗಳೂರುಗಳಲ್ಲಿ ಉತ್ತಮ ಕಂಬಳಿಗಳು ಹುಟ್ಟುತ್ತವೆ. ನವಲಗುಂದ, ನರಗುಂದಗಳಲ್ಲಿ ಜಮುಖಾನೆಗಳು ತಯಾರಾಗುತ್ತವೆ. ಮೆಡ್ಲೇರಿ ಮತ್ತು ಕುಡುಪಲಿಗಳಲ್ಲಿ ಉತ್ತಮ ಕಂಬಳಿಗಳಾಗುತ್ತವೆ. ಗಜೇಂದ್ರಗಡದಲ್ಲಿ ಶೀರೆ, ಕುಪ್ಪಸದ ಖಣಗಳು ತಯಾರಾಗುತ್ತವೆ. ಹುಬ್ಬಳ್ಳಿ-ಕಲಘಟಗಿಗಳಲ್ಲಿ ಬಣ್ಣದ ಸಾಮಾನುಗಳು ಹುಟ್ಟುತ್ತವೆ. ನರೇಂದ್ರದಲ್ಲಿ ಅಕ್ಕಸಾಲಿಗರ ಪಡಿಯಚ್ಚುಗಳು ಹುಟ್ಟುತ್ತವೆ. ಗರಗ ಮತ್ತು ಉಪ್ಪಿನಬೆಟಗೇರಿಗಳಲ್ಲಿ ಉರುಟು ಬಟ್ಟೆಗಳು ಆಗುತ್ತವೆ. ಸವಡಿಯಲ್ಲಿ ಬಿಳೀ ಅರಿವೆಯು ಹುಟ್ಟುತ್ತದೆ.

ಪುರಾಣ ಪ್ರಸಿದ್ಧವಾದ ಊರುಗಳು :—ಹಾನಗಲ್ಲ ಇದು ಮಹಾಭಾರತದಲ್ಲಿ ಪ್ರಸಿದ್ಧನಾದ ವಿರಾಟರಾಜನ ರಾಜಧಾನಿ

ಯಾದ ವಿರಾಟನಗರವೆಂದು ಹೇಳುತ್ತಾರೆ. ರೋಣ ಇದು ಮಹಾಭಾರತದಲ್ಲಿ ಪ್ರಸಿದ್ಧರಾದ ದ್ರೋಣಾಚಾರ್ಯರು ಇದ್ದ ಊರು ಎಂದು ಹೇಳುತ್ತಾರೆ. ಕೋಳಿವಾಡ ಇಲ್ಲಿ ಪಾಂಡವರು ವನವಾಸಕ್ಕೆ ಹೋಗುವಾಗ ತಮ್ಮ ಶಸ್ತ್ರಾಸ್ತ್ರಗಳನ್ನು ಇಲ್ಲಿ ಇಟ್ಟಿದ್ದರೆಂದು ಹೇಳುತ್ತಾರೆ. ಅಣ್ಣೀಗೇರಿ ಇದು ಮೊದಲಿಗೆ ಬಿಜ್ಜಳನ ರಾಜಧಾನಿಯಾಗಿತ್ತೆಂದು ಹೇಳುತ್ತಾರೆ. ಲಕ್ಕುಂಡಿ ಇದು ಮೊದಲಿಗೆ ಶಿಬಿಚಕ್ರವರ್ತಿಯ ರಾಜಧಾನಿಯಾಗಿತ್ತೆಂದು ಹೇಳುತ್ತಾರೆ.

ಇತಿಹಾಸ ಪ್ರಸಿದ್ಧವಾದ ಊರುಗಳು:—ಧಾರವಾಡ ಇದನ್ನು ಧಾರರಾಯನೆಂಬವನು ಕ್ರಿ. ಶ. ೧೪೦೩ರಲ್ಲಿ ಕಟ್ಟಿಸಿದನು. ಮುಂದೆ ಕ್ರಿ. ಶ. ೧೬೭೪ರಲ್ಲಿ ಶಿವಾಜಿಯು ತೆಗೆದುಕೊಂಡನು. ಆ ಮೇಲೆ ಇದು ಪೇಶ್ವೆಯವರ ಸರದಾರನಾದ ಬಾಪು ಗೋಖಲೆ ಎಂಬವನ ವಾಸಸ್ಥಳವಾಗಿತ್ತು. ಇಲ್ಲಿ ಒಂದು ಬಲವಾದ ಕೋಟೆ ಇತ್ತು.

ಹುಬ್ಬಳ್ಳಿ:—ಇದನ್ನು ಬಸಪ್ಪ ಶೆಟ್ಟಿ ಎಂಬ ಹುಬ್ಬಳ್ಳಿಯ ಶೆಟ್ಟಿಯು ಕಟ್ಟಿಸಿದನು. ಇತಿಹಾಸಪ್ರಸಿದ್ಧನಾದ ಛತ್ರಪತಿ ಶಿವಾಜಿ ಮಹಾರಾಜನು ಕ್ರಿ. ಶ. ೧೬೭೩ರಲ್ಲಿ ಹುಬ್ಬಳ್ಳಿಯನ್ನು ಸುಲಿದದ್ದು ಇತಿಹಾಸ ಪ್ರಸಿದ್ಧವದೆ.

ಕುಷುಗಲ್ಲು :—ಇಲ್ಲಿರುವ ಕೋಟೆಯನ್ನು ಟೀಪುಸುಲ್ತಾನನ ಸರದಾರನಾದ ಬುದ್ರುಲ್ ಜಮಾಲಖಾನನು ಕಟ್ಟಿಸಿದನೆಂದು ಹೇಳುತ್ತಾರೆ.

ನರಗುಂದ :— ಇದನ್ನು ಕ್ರಿ. ಶ. ೧೬೭೪ರಲ್ಲಿ ಶಿವಾಜಿಯು ಕಟ್ಟಿಸಿದನು. ಇಲ್ಲಿ ಭಾಸ್ಕರರಾವ ಉರ್ಫ ಬಾಬಾಸಾಹೇಬನೆಂಬವನು ಆಳುತ್ತಿದ್ದನು. ಅವನು ಕ್ರಿ. ಶ. ೧೮೫೭ರಲ್ಲಿ ಆದ ಬಂಡಾಯದಲ್ಲಿ ಕೂಡಿದ್ದರಿಂದ ಇಂಗ್ಲೀಷರು ಅವನನ್ನು ಹಿಡಿದು ಬೆಳಗಾವಿಯಲ್ಲಿ ಗಲ್ಲಿಗೆ ಹಾಕಿ ಅವನ ಸಂಸ್ಥಾನವನ್ನು ತಮ್ಮ ವಶಕ್ಕೆ ತೆಗೆದುಕೊಂಡರು.

ಮುಂಡರಗಿ :—ಇದು ಮೊದಲಿಗೆ ಸಣ್ಣ ಸಂಸ್ಥಾನವಿತ್ತು. ಇಲ್ಲಿ ಕ್ರಿ. ಶ. ೧೮೫೭ನೆಯ ಇಸ್ವಿಯಲ್ಲಿ ಮೊಂಡಗೈ ಭೀಮರಾಯನೆಂಬವನು ಆಳುತ್ತಿದ್ದನು. ಕ್ರಿ. ಶ. ೧೮೫೭ನೆಯ ಇಸ್ವಿಯ ಬಂಡಾಯದಲ್ಲಿ ಈತನು ಸೇರಿದ್ದರಿಂದ ಅದನ್ನು ಇಂಗ್ಲೀಷರು ತಮ್ಮ ವಶಮಾಡಿಕೊಂಡರು.

ರಟ್ಟೆಹಳ್ಳಿ :—ಇದನ್ನು ವಿಜಯನಗರದ ಅರಸರು ಕಟ್ಟಿಸಿದರು. ಇಲ್ಲಿ ಪೇಶ್ವೆಯವರಿಗೂ ಹೈದರನಿಗೂ ದೊಡ್ಡ ಯುದ್ಧವಾಯಿತು.

ಪ್ರಸಿದ್ಧವಾದ ದೇವಸ್ಥಾನಗಳೂ, ಮಠಗಳೂ, ಮಸೀದಿಗಳೂ ಇರುವ ಸ್ಥಳಗಳು :—ಧಾರವಾಡದಲ್ಲಿ ಬಹು ಪ್ರಸಿದ್ಧವಾದ ಸೋಮೇಶ್ವರ ದೇವರ ಗುಡಿಯೂ, ಶ್ರೀ ಉಳವೀ ಬಸವೇಶ್ವರ ಗುಡಿಯೂ ಮತ್ತು ಮೈಲಾರಲಿಂಗನ ಗುಡಿಯೂ ಉಂಟು. ಹುಬ್ಬಳ್ಳಿಯಲ್ಲಿ ಶ್ರೀ ಸಿದ್ಧಾರೂಢಸ್ವಾಮಿಗಳ ಮಠವೂ, ಮೂರುಸಾವಿರಸ್ವಾಮಿಗಳ ಮಠವೂ ಉಂಟು. ಛಬ್ಬಿಯಲ್ಲಿ ಪುರಾತನ ಕಾಲದ ಹಾಳು ದೇವಾಲಯಗಳು ಅನೇಕವುಂಟು. ಇದಕ್ಕೆ ಮೊದಲು ಶೋಭನಪುರವೆನ್ನುತ್ತಿದ್ದರು. ಅಣ್ಣಿಗೇರಿಯಲ್ಲಿ ಜಕ್ಕಣಾಚಾರ್ಯನು ಕಟ್ಟಿದ ಅಮೃತೇಶ್ವರ ಗುಡಿಯು ಬಹು ಪ್ರಸಿದ್ಧವಿದೆ. ಯಮನೂರಲ್ಲಿ ರಾಜಾಬಾಗಸವಾರ ಎಂಬ ಪೀರನ ಗೋರಿ ಇದ್ದು ದೊಡ್ಡ ಜಾತ್ರೆಯಾಗುತ್ತದೆ. ದೇವಗಿರಿಯಲ್ಲಿ ಜಕ್ಕಣಾಚಾರ್ಯನು ಕಟ್ಟಿದ ಎಲ್ಲಮ್ಮ ದೇವರ ಗುಡಿಯುಂಟು. ದೇವರಗುಡ್ಡ ಇದು ರಾಣೇಬೆನ್ನೂರ ತಾಲೂಕಿನಲ್ಲಿ ಅದೆ. ಇಲ್ಲಿ ಮೈಲಾರದೇವರ ಗುಡಿಯು ಬಹು ಪ್ರಸಿದ್ಧವಿದೆ. ಇಲ್ಲಿ ನವರಾತ್ರಿಯಲ್ಲಿ ದೊಡ್ಡ ಜಾತ್ರೆಯಾಗುತ್ತದೆ. ಈ ಜಾತ್ರೆಯಲ್ಲಿ ಎತ್ತಿನ ವ್ಯಾಪಾರವು ದೊಡ್ಡ ಪ್ರಮಾಣದಿಂದ ಆಗುತ್ತದೆ. ಕದರಮುಂಡಲಗಿ ಇದು ರಾಣೇಬೆನ್ನೂರ ತಾಲೂಕಿನಲ್ಲಿ ಅದೆ. ಇಲ್ಲಿಯ ಹನುಮಂತ ದೇವರ ಗುಡಿಯನ್ನು ಜಕ್ಕಣಾಚಾರ್ಯನು ಕಟ್ಟಿದ್ದನೆಂದು ಹೇಳು

ತ್ತಾರೆ. ಬಂಕಾಪುರದಲ್ಲಿ ನಗರೇಶ್ವರ ಬಸ್ತಿ ಎಂಬ ಗುಡಿಯು ನೋಡತಕ್ಕಂತಹದಿರುತ್ತದೆ. ಹುಲಗೂರಲ್ಲಿ ಹಜರತ್‌ಶಹ ಖಾದರಿ ಎಂಬ ಪೀರನ ಗೋರಿಯು ಅದೆ. ಇಲ್ಲಿ ಪ್ರತಿವರ್ಷ ಈ ಪೀರನ ಜಾತ್ರೆಯಾಗುತ್ತದೆ. ಉದಲಾಬಾದದಲ್ಲಿ ಒಂದು ಗುಹೆಯೂ, ಗಂಗೀಭಾವಿ ಎಂಬುದೊಂದು ಭಾವಿಯೂ ಉಂಟು. ಈ ಗುಹೆಯಲ್ಲಿ ಜಾನ್ವ್ವಿ ಎಂಬ ಯೋಗಿಯು ವಾಸವಾಗಿದ್ದನೆಂತಲೂ, ಆತನು ಗಂಗೀಭಾವಿಯ ನೀರನ್ನು ಬಾಯಿಯಿಂದ ಕುಡಿದು ಕಿವಿಯಿಂದ ಬಿಡುತ್ತಿದ್ದನೆಂತಲೂ ದಂತಕಥೆಯುಂಟು. ಈ ಭಾವಿಯಲ್ಲಿ ಸ್ನಾನ ಮಾಡಿದರೆ ಜ್ವರಪರಿಹಾರವಾಗುವದೆಂದು ಹೇಳುತ್ತಾರೆ. ಈ ಭಾವಿಯ ದಂಡೆಯ ಮೇಲೆ ಕುಮತೀಶ್ವರ ದೇವರ ಗುಡಿಯುಂಟು. ಹಿರೇಕೆರೂರದಲ್ಲಿ ಜನಮೇಜಯರಾಯನು ಕಟ್ಟಿಸಿದ ದೊಡ್ಡ ಕೆರೆಯದೆ. ಆ ಕೆರೆಯ ದಂಡೆಯ ಮೇಲೆ ದುರ್ಗಾದೇವಿಯ ಪ್ರಸಿದ್ಧ ದೇವಸ್ಥಾನವಿದೆ. ಈ ದೇವಿಯ ಜಾತ್ರೆಯು ಮೂರು ವರ್ಷಕ್ಕೆ ಒಂದಾವರ್ತಿ ದೊಡ್ಡದಾಗುತ್ತದೆ. ಬಾಳಿಂಬಿಡದಲ್ಲಿ ವಿಷಪರಿಹರೇಶ್ವರ ದೇವರ ಗುಡಿಯು ಬಹು ಪ್ರಸಿದ್ಧವದೆ. ಹಾವು ಕಡಿದವರನ್ನು ಈ ಗುಡಿಯಲ್ಲಿ ಹಾಕಿ ದೇವರ ಸ್ನಾನೋದಕವನ್ನು ಕುಡಿಸಿದರೆ ವಿಷವು ಬಾಧಿಸುವದಿಲ್ಲವೆಂದು ಹೇಳುತ್ತಾರೆ. ರಟ್ಟಿಹಳ್ಳಿಯಲ್ಲಿ ಪ್ರಸಿದ್ಧ ಕದಂಬೇಶ್ವರನ ಗುಡಿಯೂ, ವೀರ

ಭದ್ರದೇವರ ಗುಡಿಯೂ ಉಂಟು. ಈ ವೀರಭದ್ರದೇವರಿಗೆ ಪ್ರತಿವರ್ಷ ಯುಗಾದಿಯಾದ ದಿವಸಕ್ಕೆ ರಥೋತ್ಸವವು ಆಗುತ್ತದೆ. ಈ ಜಾತ್ರೆಯಲ್ಲಿ ಮೈಸೂರ ಹೋರಿಗಳ ವ್ಯಾಪಾರವು ಬಹಳ ದೊಡ್ಡ ಪ್ರಮಾಣದಿಂದ ಆಗುತ್ತದೆ. ಹಳ್ಳೂರಲ್ಲಿಯ ರಂಗನಾಥ ದೇವರ ದೇವಸ್ಥಾನವು ಪ್ರಸಿದ್ಧವಿರುತ್ತದೆ ಇದನ್ನು ಟೀಪುಸುಲ್ತಾನನು ಕೆಡವಿದ್ದನು. ಅದನ್ನು ಕೂಡಲಗಿಯ ಸ್ವಾಮಿಗಳು ಪುನಃ ಕಟ್ಟಿಸಿರುತ್ತಾರೆ. ಕಾಗಿನೆಲ್ಲಿಯ ಆದಿಕೇಶವದೇವರ ಗುಡಿಯು ಬಹು ಪ್ರಸಿದ್ಧವದೆ. ಇಲ್ಲಿ ಕನಕದಾಸನೆಂಬ ಭಗವದ್ಭಕ್ತನು ಇರುತ್ತಿದ್ದನು. ಈತನ ಹಾಡುಗಳು ಕನಕದಾಸರ ಪದಗಳೆಂದು ಬಹು ಜನಪ್ರಿಯವಿರುತ್ತವೆ. ಅಬಲೂರಲ್ಲಿ ಜಕ್ಕಣಾಚಾರ್ಯನು ಕಟ್ಟಿದ ಏಕಾಂತ ರಾಮೇಶ್ವರ ಮತ್ತು ಬ್ರಹ್ಮೇಶ್ವರ ಎಂಬ ದೇವಸ್ಥಾನಗಳು ನೋಡತಕ್ಕಂತಹವಿವೆ. ಇಲ್ಲಿ ಏಕಾಂತ ರಾಮೇಶ್ವರನೆಂಬ ಮಹಾಯೋಗಿಯು ಇರುತ್ತಿದ್ದನು. ಇಲ್ಲಿಯೇ ಪ್ರಖ್ಯಾತನಾದ ಸರ್ವಜ್ಞ ಕವಿಯು ಹುಟ್ಟಿದನು. ಮಾಸೂರಲ್ಲಿ ಸರ್ವಜ್ಞ ಕವಿಯ ತಂದೆಯು ವಾಸವಾಗಿದ್ದನು.

ಭಗವದ್ಭಕ್ತರು, ಸ್ವಾಮಿಗಳು, ವೀರರು, ಮತ್ತು ಕವಿಗಳು:—ಹುಬ್ಬಳ್ಳಿಯಲ್ಲಿ ಶ್ರೀ ಸಿದ್ಧಾರೂಢ ಸ್ವಾಮಿಗಳೆಂಬ

ಸಾಧುಗಳು ಇರುತ್ತಿದ್ದರು. ಅವರಿಗೆ ಯಾವತ್ತೂ ಜಾತಿಯ ಜನರು ಭಕ್ತರಾಗಿದ್ದರು.

ಶಿಶುನಾಳ ಶರೀಫಸಾಹೇಬರು :—ಇವರು ಮುಸಲ್ಮಾನರು. ಆದರೆ ಹಿಂದೂ ವೇದಾಂತ ಮಾರ್ಗಾವಲಂಬಿಗಳು. ಇವರ ಹಾಡುಗಳು ಬಹು ಪ್ರಸಿದ್ಧವವೆ. ಈಗಲೂ ಜನರು ಅವುಗಳನ್ನು ಪ್ರೇಮದಿಂದ ಹಾಡುತ್ತಾರೆ.

ಮುಳಗುಂದದ ಮಹಂತಸ್ವಾಮಿಗಳು :—ಇವರು ದೊಡ್ಡ ಸಾಧುಗಳು.

ಅಬ್ಬಲೂರ ಏಕಾಂತರಾಮೇಶ್ವರರು :—ಇವರು ಬಹು ಪ್ರಾಚೀನ ಕಾಲದಲ್ಲಿ ಹಿರೇಕೆರೂರ ತಾಲೂಕಿನಲ್ಲಿ ಈಗ ಅಬ್ಬಲೂರೆಂದು ಕರೆಯಲ್ಪಡುವ ಬಬ್ಬಲಾವತಿ ಪಟ್ಟಣದಲ್ಲಿ ಇರುತ್ತಿದ್ದರು. ಇವರು ತಮ್ಮ ಶಿರಸ್ಸನ್ನು ಕಡಿದುಕೊಂಡು ಏಳು ಗಿರಿಗಳನ್ನು ಸುತ್ತಿ ತಂದು ಶಿರಸ್ಸನ್ನು ಹಚ್ಚಲು ಅದು ಬೆಳೆಯಿತೆಂದು ಪ್ರಖ್ಯಾತಿಯುಂಟು. ಇದೇ ಊರಲ್ಲಿ ಪ್ರಸಿದ್ಧ ಸರ್ವಜ್ಞ ಕವಿಯು ಹುಟ್ಟಿದ್ದನು.

ಕಾಗಿನೆಲ್ಲಿಯ ಕನಕದಾಸರು :—ಇವರು ಆದಿಕೇಶವ ದೇವರ ಭಕ್ತರು. ಮಹಾ ವೇದಾಂತಿಗಳು. ಇವರು ವೇದಾಂತವನ್ನು ಅಚ್ಚಗನ್ನಡದಲ್ಲಿ ಹಾಡಿದ್ದಾರೆ.

ಕುಮಾರವ್ಯಾಸ :—ಇವರು ಪ್ರಸಿದ್ಧ ಕವಿಗಳು. ಕೋಳಿ ಗುಂಡದಲ್ಲಿ ಇರುತ್ತಿದ್ದರು.

ಲಕ್ಷ್ಮೇಶ್ವರದಲ್ಲಿ ಕನ್ನಡದಲ್ಲಿ ಪ್ರಸಿದ್ಧವಾದ ಆದಿಪಂಪ ಕವಿಯೂ, ಸೋಮೇಶ್ವರ ಶತಕವನ್ನು ಬರೆದ ಸೋಮೇಶ್ವರ ಕವಿಯೂ ಆಗಿಹೋದರು.

ಬೆಳೆ :—ಈ ಜಿಲ್ಹೆಯನ್ನು ಸಾಧಾರಣವಾಗಿ ಎರಡು ಭಾಗ ಗಳನ್ನು ಮಾಡಬಹುದು—(೧) ಮಲನಾಡು, (೨) ಬೆಳವಲ. ಧಾರವಾಡ ತಾಲೂಕಿನ ಕೆಲವು ಭಾಗವೂ, ಕಲಘಟಗಿ, ಶಿಗ್ಗಾವ ತಾಲೂಕಿನ ಕೆಲವು ಭಾಗವೂ, ಹಾನಗಲ್ಲ ಕೋಡ ತಾಲೂಕುಗಳೂ ಮಲನಾಡು; ಉಳಿದವುಗಳೆಲ್ಲ ಬೆಳವಲ (ಬೈಲುಸೀಮೆ). ಮಲನಾಡಿನಲ್ಲಿ ಮುಖ್ಯವಾಗಿ ಭತ್ತವೂ, ಅಲ್ಪಸ್ವಲ್ಪ ಕಬ್ಬೂ ಬೆಳೆಯುತ್ತವೆ. ಬೈಲುಸೀಮೆಯಲ್ಲಿ ಜೋಳ, ಹತ್ತಿ, ಎಳ್ಳು, ಕುಸುಬೆ, ಗೋದಿಗಳು ಬೆಳೆಯುತ್ತವೆ. ರಾಗಿ, ಕಡ್ಲಿ, ಹೆಸರು, ಅವರಿ, ತೊಗರಿ ಮುಂತಾದವುಗಳು ಅಲ್ಪಸ್ವಲ್ಪ ಬೆಳೆಯುತ್ತವೆ.

ಉದ್ಯೋಗ :—ಒಕ್ಕತನವೇ ಮುಖ್ಯ ಉದ್ಯೋಗವು. ಆದರೆ ಈ ಜಿಲ್ಹೆಯಲ್ಲಿ ಹೇಳತಕ್ಕಂತಹ ಮತ್ತು ಸುಧಾರಿಸಿದ ಪದ್ಧತಿಯಂತೆ ಬೆಳೆಯನ್ನು ತೆಗೆದುಕೊಳ್ಳುವಂತಹ ರೈತರು ಯಾರೂ ಇರುವದಿಲ್ಲ. ವ್ಯಾಪಾರಸ್ಥರು ಉಂಟು. ತೀರ

ಸ್ವಲ್ಪ ಜನರು ಕೈಗಾರಿಕೆಯ ಉದ್ಯೋಗವನ್ನು ಮಾಡುತ್ತಾರೆ. ಬ್ರಾಹ್ಮಣರು ನೌಕರಿಯನ್ನು ಮಾಡುತ್ತಾರೆ. ಅಲ್ಲದೆ ಎಲ್ಲ ಜಾತಿಯವರೂ ನೌಕರಿಯನ್ನು ಮಾಡಲಿಕ್ಕೆ ಹತ್ತಿದ್ದಾರೆ.

ಧರ್ಮ:—ಈ ಜಿಲ್ಹೆಯಲ್ಲಿ ಲಿಂಗಾಯತರೇ ಹೆಚ್ಚು. ಕುರುಬರು, ರಡ್ಡೀ ಜನರು, ಬ್ರಾಹ್ಮಣರು, ಮುಸಲ್ಮಾನರು, ಮರಾಠಾ ಜನರು, ವೈಶ್ಯರು, ಜೈನರು ಅಲ್ಪ ಪ್ರಮಾಣದಿಂದ ಇದ್ದಾರೆ. ಕೆಲವು ಕಡೆಯಲ್ಲಿ ಕ್ರೈಸ್ತರಿರುವರು. ಒಡ್ಡರು, ಕೊರವರು, ಲಮಾಣಿಗರು, ಇತರ ಕಾಡುಜಾತಿಯವರೂ ಅಲ್ಪ ಸ್ವಲ್ಪ ಜನರಿದ್ದಾರೆ.

ಜನರು ಒಟ್ಟಿನ ಮೇಲೆ ಸುಧಾರಿಸಿದವರು. ಮಹಾರಾಷ್ಟ್ರದೊಳಗಿನ ಹಳ್ಳಿಯ ಜನರಿಗಿಂತ ಹೆಚ್ಚಿಗೆ ಸುಧಾರಿಸಿದವರು. ಬಸವೇಶ್ವರನು ಯಾವತ್ತೂ ಜಾತಿಯ ಜನರಿಗೆ ಲಿಂಗಧಾರಣ ಮಾಡಿ ಅವರಲ್ಲಿ ಸುಧಾರಣೆ ಮಾಡಿದ್ದರಿಂದ ಹೆಚ್ಚಿಗೆ ಸುಧಾರಣೆಯಾಗಿದೆ ಎಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಆದರೆ ಈ ಜಿಲ್ಹೆಯ ಜನರು ದೀರ್ಘ ಪ್ರಯತ್ನ ಮಾಡುವವರಲ್ಲ.

ಭಾಷೆ:—ಇಲ್ಲಿ ಆಡುವ ಭಾಷೆಯು ಕನ್ನಡ. ಆದರೆ ಈವರೆಗೂ ಕನ್ನಡಕ್ಕಿಂತ ಮರಾಠಿಗೆ ಹೆಚ್ಚು ಆದರವಿತ್ತು. ಪೇಶ್ವೆಯವರು ರಾಜ್ಯ ಮಾಡಿದಾಗಿನಿಂದ ಮರಾಠಿಗೆ ಹೆಚ್ಚು

ಮರ್ಯಾದೆ ಸಿಗಹತ್ತಿತು. ಮತ್ತು ಕರ್ನಾಟಕದಲ್ಲಿಯ ಸಣ್ಣ ಸಣ್ಣ ಸಂಸ್ಥಾನಿಕರು ಮಹಾರಾಷ್ಟ್ರರಾದುದರಿಂದ ಮರಾಠಿಯೇ ಕನ್ನಡಕ್ಕಿಂತ ಹೆಚ್ಚಿಗೆ ಪೋಷಿಸಲ್ಪಟ್ಟಿತು. ಇದೆಲ್ಲಕ್ಕಿಂತ ಹೆಚ್ಚಿನ ಕಾರಣಗಳೆಂದರೆ, ವಿದ್ಯಾಖಾತೆಯಲ್ಲಿ ಮೊದಲಿಗೆ ಮಹಾರಾಷ್ಟ್ರದ ಜನರೇ ಸೇರಿದ್ದರಿಂದ ಕನ್ನಡಕ್ಕೆ ಸಿಗತಕ್ಕಷ್ಟು ಉತ್ತೇಜನವು ಸಿಗಲಿಲ್ಲ. ಕರ್ನಾಟಕವು ತುಂಡುತುಂಡಾಗಿ ಹೋದುದರಿಂದಲೂ ಕರ್ನಾಟಕದ ವಾಙ್ಮಯವು ಬೆಳೆಯಲಿಲ್ಲ. ಕರ್ನಾಟಕದ ಪುಢಾರಿಗಳೂ ಕನ್ನಡಕ್ಕಿಂತ ಮರಾಠಿಯೇ ಪೂಜ್ಯವೆಂದು ಈವರೆಗೂ ತಿಳಿಯುತ್ತಿದ್ದರು. ಆದರೆ ಇತ್ತಿತ್ತಲಾಗಿ ಕರ್ನಾಟಕದ ತರುಣರಲ್ಲಿ ಚಳವಳಿಯಾಗಿ ಮಾತೃಭಾಷೆಯ ಪ್ರೇಮವೂ. ಕರ್ನಾಟಕದ ಏಕೀಕರಣವಾಗಬೇಕೆಂಬ ಇಚ್ಛೆಯೂ ಬೆಳೆಯಲಿಕ್ಕೆ ಹತ್ತಿರುತ್ತವೆ.

ಭೂಮಿ :—ಧಾರವಾಡ ಜಿಲ್ಹೆಯ ಭೂಮಿಯು ಮುಖ್ಯವಾಗಿ ಎರೆ, ಮಸಾರಿ, ಗುಡ್ಡಗಾಡು ಎಂದು ವಿಭಾಗಿಸಬಹುದು. ಭೂಮಿಯು ಉತ್ತಮವಾದದ್ದಿದ್ದು ಬೆಳೆಯು ಚನ್ನಾಗಿ ಬರುತ್ತದೆ. ನವಲಗುಂದ, ರೋಣ, ಗದಗ ತಾಲೂಕುಗಳಿಗೆ ಇತ್ತಿತ್ತಲಾಗಿ ಮಳೆಯು ಚನ್ನಾಗಿ ಆಗುವದಿಲ್ಲ.

ಕಾಲುವೆಗಳು :—ಹಾನಗಲ್ಲ ತಾಲೂಕಿನಲ್ಲಿ ಶ್ರಿಂಗೇರಿ ಹತ್ತಿರ ಧರ್ಮಾನದಿಗೆ ವಿಜಯನಗರದ ಅರಸರು ಒಡ್ಡು ಹಾಕಿ

ಸಿದ್ದರು. ಶ್ರಿಂಗೇರಿಯಿಂದ ಆಡೂರವರೆಗೆ ಕಾಲುವೆ ಇದೆ. ಇದೇ ತಾಲೂಕಿನಲ್ಲಿ ಕಂಚಿ-ನೆಗಳೂರ ಕಾಲುವೆಯೂ ಉಂಟು. ಕೋಡ ತಾಲೂಕಿನಲ್ಲಿ ಮದಗದ ಸರೋವರದಿಂದ ಕಾಲುವೆಗಳನ್ನು ಮಾಡಿ ೬--೭ ಮೈಲು ದೂರದವರೆಗೆ ನೀರು ಪೂರೈಸಿರುತ್ತಾರೆ. ತುಂಗಭದ್ರಾ ನದಿಗೆ ಕೋಡ ತಾಲೂಕಿನಲ್ಲಿ ಬೈರನಪಾದದ ಹತ್ತರ ಒಡ್ಡು ಹಾಕಿದರೆ ೪-೫ ತಾಲೂಕುಗಳಿಗೆ ನೀರು ಪೂರೈಸಬಹುದು ಆದರೆ ಮುಂಬಯಿ ಕಾಯಿದೆ ಕೌನ್ಸಿಲದಲ್ಲಿ ಕರ್ನಾಟಕದ ಮೆಂಬರರ ಕೆಲಸವು ಏನೂ ನಡೆಯುವಂತೆ ಇಲ್ಲ. ಕಾರಣ ಇತ್ತ ಯಾರೂ ಲಕ್ಷಗೊಟ್ಟಂತೆ ಕಾಣುವದಿಲ್ಲ. ಕಲಘಟಗಿ ತಾಲೂಕಿನಲ್ಲಿ ಕಲಾಲಾ ಎಂಬ ಕಾಲುವೆಯು ಇದೆ.

ಹವೆ:—ಪಶ್ಚಿಮ-ದಕ್ಷಿಣ ದಿಕ್ಕುಗಳ ಹವೆಯು ಶೀತಕಾರಕವಾದದ್ದು. ಪೂರ್ವ-ಉತ್ತರಗಳ ಹವೆಯು ಆರೋಗ್ಯಕಾರಕವಾದದ್ದು ಇರುತ್ತದೆ.

ಮಳೆ-ಗಾಳಿಗಳು:—ಈ ಜಿಲ್ಹೆಗೆ ಬರುವ ಗಾಳಿಗಳು ಮೂಡಲ ಗಾಳಿ, ಪಡುವಲ ಗಾಳಿ. ಮಳೆಯಾದರೂ ಗಾಳಿಯು ಬರುವ ದಿಕ್ಕಿನಿಂದ ಬರುವದರಿಂದ ಮೂಡಲ ಮಳೆ, ಪಡುವಲ ಮಳೆ ಎಂದು ಹೆಸರಾಗಿರುವವು. ಈ ಜಿಲ್ಹೆಯು ಪಶ್ಚಿಮ ಸಮುದ್ರದ ಹತ್ತರ ಇರುವದರಿಂದ ಪಶ್ಚಿಮದ ಗಾಳಿಯೂ ಪಡುವಲ

ಮಳೆಯೂ ಜೂನ ತಿಂಗಳಲ್ಲಿ ಮೊದಲಿಗೆ ಪ್ರಾರಂಭವಾಗಿ ನಾಲ್ಕು ತಿಂಗಳು ಇರುತ್ತವೆ. ಆ ಮೇಲೆ ಪೂರ್ವದ ಗಾಳಿಯು ಸುರುವಾಗಿ ಪೂರ್ವ ದಿಕ್ಕಿನಿಂದ ಮಳೆ ಬರುವದು. ಈ ಮಳೆಯು ಅಕ್ಟೋಬರ, ನವ್ಹಂಬರ, ಡಿಸೆಂಬರ ತಿಂಗಳುಗಳಲ್ಲಿ ಆಗುವದು.

ಧಾರವಾಡ ಜಿಲ್ಹೆಯ ಸಾಮಾನ್ಯ ವರ್ಣನೆ:—ಈ ಜಿಲ್ಹೆಯ ಪಶ್ಚಿಮ ಮತ್ತು ದಕ್ಷಿಣದ ಭಾಗವು ಗುಡ್ಡ ಮತ್ತು ಅಡವಿಗಳಿಂದ ತುಂಬಿರುತ್ತದೆ. ಅಲ್ಲಿ ಕಾಡಮೃಗಗಳು ಇರುತ್ತವೆ. ಕೆಲಕೆಲವು ಕಡೆಯಲ್ಲಿ ಇಮಾರತಿನ ಕಟ್ಟಿಗೆಗಳಿಗೆ ಬರುವ ಗಿಡಗಳು ಬೆಳೆಯುತ್ತವೆ. ಉಳಿದ ಕಡೆಯಲ್ಲೆಲ್ಲ ಸಣ್ಣ ಸಣ್ಣ ಉರುವಲ ಕಟ್ಟಿಗೆಯ ಗಿಡಗಳೂ, ಕಡ್ಡಿಹುಲ್ಲುಗಳೂ ಬೆಳೆಯುತ್ತವೆ. ಜಿಲ್ಹೆಯ ಉಳಿದ ಎಲ್ಲ ಭಾಗವು ಸಮನೆಲವಿದ್ದು ಬೈಲಾಗಿರುತ್ತದೆ. ಬೈಲುದೇಶದ ಭೂಮಿಯು ಕರಿಯ ಭೂಮಿಯಾಗಿದ್ದು ಉತ್ತಮ ಬೆಳೆ ಬರುವಂತಹದು ಇರುತ್ತದೆ. ಆದರೆ ನವಲಗುಂದ, ರೋಣ ಮತ್ತು ಗದಗ ತಾಲೂಕುಗಳಿಗೆ ಮಳೆಯು ಸರಿಯಾಗಿ ಆಗದ್ದರಿಂದ ರೈತರಿಗೆ ಬಹಳ ಕಷ್ಟವಾಗಿರುತ್ತದೆ.

ಧಾರವಾಡ ಜಿಲ್ಹೆಯ ಕ್ಷೇತ್ರಫಲ:—ಧಾರವಾಡ ಜಿಲ್ಹೆಯ ಚೌರಸ ಮೈಲು ೪೫೦೩ ಉಂಟು.

ಮೇರೆಗಳು:—ಇದರ ಉತ್ತರಕ್ಕೆ ಬೆಳಗಾವಿ ಜಿಲ್ಹೆ, ವಿಜಾಪುರ ಜಿಲ್ಹೆಗಳೂ, ರಾಮದುರ್ಗ ಸಂಸ್ಥಾನವೂ, ಪೂರ್ವಕ್ಕೆ ಮೊಗಲಾಯಿ ರಾಜ್ಯ, ಬಳ್ಳಾರಿ ಜಿಲ್ಹೆ, ಮೈಸೂರ ಪ್ರಾಂತ, ದಕ್ಷಿಣಕ್ಕೆ ಮೈಸೂರ ಸಂಸ್ಥಾನ, ಪಶ್ಚಿಮಕ್ಕೆ ಕಾರವಾರ ಜಿಲ್ಹೆ ಉಂಟು.



---

## ೫ನೆಯ ಪ್ರಕರಣ.

### ಸ್ಥಾನಿಕ ಹಕ್ಕುಗಳು.

ಸ್ಥಾನಿಕ ಸ್ವರಾಜ್ಯ:—ಸ್ಥಾನಿಕ ಸ್ವರಾಜ್ಯವೆಂದರೆ, ಪ್ರತಿಯೊಂದು ಹಳ್ಳಿ, ಪಟ್ಟಣ, ತಾಲೂಕು, ಜಿಲ್ಹೆಗಳ ಜನರು ತಮ್ಮ ತಮ್ಮ ಶಿಕ್ಷಣ, ಆರೋಗ್ಯ, ನೀರಿನ ವ್ಯವಸ್ಥೆ, ಅಡ್ಡಾಡುವ ದಾರಿಗಳ ವ್ಯವಸ್ಥೆ, ಶಿಕ್ಷಣದ ಬೆಳವಣಿಗೆ ಮೊದಲಾದ ಕೆಲಸಗಳನ್ನು ತಮ್ಮ ತಮ್ಮೊಳಗೆ ಸಾಮೂಹಿಕ ರೀತಿಯಿಂದ ಮಾಡಿಕೊಂಡು ಹೋಗುವದಕ್ಕಾಗಿ ಕಾಯಿದೆಯಿಂದ ಮಾಡಿದ ಸಂಸ್ಥೆಗಳು. ಉದಾಹರಣಾರ್ಥವಾಗಿ—ವಿಲೇಜ ಪಂಚಾಯತಿ, ಮುನಿಸೀಪಾಲಿಟಿ, ತಾಲೂಕ ಲೋಕಲ್ ಬೋರ್ಡ ಮತ್ತು ಡಿಸ್ಟ್ರಿಕ್ಟ ಲೋಕಲ್ ಬೋರ್ಡ ಮುಂತಾದವುಗಳು.

ವಿಲೇಜ ಪಂಚಾಯತಿ :—ಸಾಧಾರಣ ದೊಡ್ಡ ದೊಡ್ಡ ಗ್ರಾಮಗಳಲ್ಲಿ ವಿಲೇಜ ಪಂಚಾಯತಿಗಳು ಅವೆ. ಇಪ್ಪತ್ತೊಂದು ವರ್ಷ ವಯಸ್ಸುಳ್ಳ ಎಲ್ಲ ಗಂಡಸರಿಗೆ ಹೋಟು (ಮತ) ಗಳನ್ನು ಕೊಡುವ ಅಧಿಕಾರವು ಇರುವದು. ಈ ಹೋಟರ ಜನರು ತಮ್ಮ ತಮ್ಮೊಳಗಿನಿಂದ ಜನರನ್ನು ಆರಿಸಿ ಕೊಡುತ್ತಾರೆ. ಈ ಜನರು ತಮ್ಮದೊಂದು ಕಮಿಟಿಯನ್ನು ಮಾಡಿಕೊಂಡು ತಮ್ಮ ತಮ್ಮ ಊರಿನ ಸ್ವಚ್ಛತೆ, ನೀರು, ದೀಪ, ರಸ್ತೆಗಳ ದುರಸ್ತಿ ಮೊದಲಾದ ಕೆಲಸಗಳನ್ನು ಮಾಡಿಸುತ್ತಾರೆ.

ಮುನಸೀಪಾಲಿಟಿ :—ಊರು ದೊಡ್ಡದಿದ್ದರೆ ಅಲ್ಲಿ ಮುನಸೀಪಾಲಿಟಿ ಇರುವದು. ವಿಲೇಜ ಪಂಚಾಯತಿಯಂತೆಯೇ ಇವರ ಕೆಲಸವಿರುತ್ತದೆ. ಶಿಕ್ಷಣದ್ದೊಂದು ದೊಡ್ಡ ಕೆಲಸವು ಮುನಸೀಪಾಲಿಟಿಗಳ ಮೇಲೆ ಹೊರಿಸಲ್ಪಟ್ಟದೆ.

ಧಾರವಾಡ ಜಿಲ್ಹೆಯಲ್ಲಿ ಹುಬ್ಬಳ್ಳಿ ಮುನಸೀಪಾಲಿಟಿಯು ಎಲ್ಲ ಮುನಸೀಪಾಲಿಟಿಗಳಿಗಿಂತ ದೊಡ್ಡದು. ಇದರ ಉತ್ಪನ್ನವೂ ಹೆಚ್ಚು. ಗದಗಿನ ಮುನಸೀಪಾಲಟಿಯಾದರೂ ದೊಡ್ಡದಿದೆ. ಗದಗು ವ್ಯಾಪಾರದ ಸ್ಥಳವಾದುದರಿಂದ ಇದರ ಉತ್ಪನ್ನವಾದರೂ ಹೆಚ್ಚು. ಧಾರವಾಡವು ಜಿಲ್ಹೆಯ ಮುಖ್ಯ ಸ್ಥಳವು. ಧಾರವಾಡ ಮುನಸೀಪಾಲಿಟಿಯವರು ಒಳ್ಳೆಯ

ಸುಂದರವಾದ ಮುನಸೀಪಲ್ ಆಫೀಸನ್ನು ಕಟ್ಟಿಸಿರುವರು. ಹಾವೇರಿ ಬ್ಯಾಡಗಿ, ರಾಣೇಬೆನ್ನೂರು, ನವಲಗುಂದ, ಸರಗುಂದಗಳಲ್ಲಿಯೂ ಮುನಸೀಪಾಲಿಟಿಗಳು ಉಂಟು.

ತಾಲೂಕ ಲೋಕಲ್ ಬೋರ್ಡ:—ಪ್ರತಿಯೊಂದು ತಾಲೂಕಿಗೂ ತಾಲೂಕ ಲೋಕಲ್ ಬೋರ್ಡುಗಳು ಉಂಟು. ಈ ಬೋರ್ಡುಗಳು ಡಿಸ್ಟ್ರಿಕ್ಟ ಲೋಕಲ್ ಬೋರ್ಡಿಗೆ ಆಧೀನಗಳಾಗಿ ಕೆಲಸ ಮಾಡುತ್ತವೆ.

ಡಿಸ್ಟ್ರಿಕ್ಟ ಲೋಕಲ್ ಬೋರ್ಡ:—ಜಿಲ್ಹೆಯೊಳಗಿನ ಜನರು ತಮ್ಮ ಜಿಲ್ಹೆಯೊಳಗಿನ ಸ್ವಚ್ಛತೆ, ಔಷಧೋಪಚಾರ, ರಸ್ತೆಗಳನ್ನು ದುರಸ್ತ ಇಡುವದು, ಶಿಕ್ಷಣ ಮುಂತಾದವು ಜನರಿಗೆ ಉಪಯೋಗ ಹಾಗು ಆರೋಗ್ಯಕರವಾಗುವ ಕೆಲಸಗಳನ್ನು ಮಾಡುವ ಅಧಿಕಾರವನ್ನು ಸರಕಾರದವರು ಜಿಲ್ಹಾ ಲೋಕಲ್ ಬೋರ್ಡಿಗೆ ಒಪ್ಪಿಸಿದ್ದಾರೆ. ಈಗ ಜಿಲ್ಹಾ ಲೋಕಲ್ ಬೋರ್ಡು ಒಂದು ಮಹತ್ವದ ಸಂಸ್ಥೆಯಾಗಿದೆ. ಜನರು ಈ ಬೋರ್ಡಿನಲ್ಲಿ ಒಳ್ಳೆಯ ಕಳಕಳಿಯನ್ನು ತೋರಿಸಹತ್ತಿದ್ದಾರೆ. ಮೂವತ್ತೆರಡು ರೂಪಾಯಿ ಕಂದಾಯವನ್ನು ಕೊಡುವ ಅಥವಾ ಅಷ್ಟು ಕಂದಾಯದ ಭೂಮಿಯನ್ನು ಲಾವಣಿ ಮಾಡುವ ಪ್ರತಿಯೊಬ್ಬ ಮನುಷ್ಯನಿಗೆ ಮತಗಳನ್ನು

ಕೊಡುವ ಅಧಿಕಾರವಿದೆ. ಎಲ್ಲ ತಾಲೂಕಿನ ಮತದಾರರು ಒಟ್ಟಿಗೆ ಇಪ್ಪತ್ತು ಜನರನ್ನು ಮೆಂಬರರನ್ನಾಗಿ ಆರಿಸಿ ಕಳುಹಿಸುತ್ತಾರೆ. ಮುಸಲ್ಮಾನರಿಗೆ ನಾಲ್ಕು ಜನ ಮೆಂಬರರನ್ನು ಆರಿಸಿ ಕಳುಹಿಸುವ ಅಧಿಕಾರವದೆ. ಸರಕಾರದವರು ಆರು ಜನರನ್ನು ಆರಿಸಿ ಕಳುಹಿಸುವರು. ಹೀಗೆ ಒಟ್ಟಿಗೆ ಮೂವತ್ತು ಜನರು ಡಿಸ್ಟ್ರಿಕ್ಟ ಲೋಕಲ್ ಬೋರ್ಡಿನ ಮೆಂಬರ(ಸಭಾಸದ) ರಾಗುವರು. ಇವರು ತಮ್ಮ ಪ್ರೆಸಿಡೆಂಟ (ಅಧ್ಯಕ್ಷ) ರನ್ನು ತಾವೇ ಆರಿಸಿಕೊಳ್ಳುವರು. ಜಿಲ್ಹೆಯೊಳಗಿನ ಶಿಕ್ಷಣದ ವ್ಯವಸ್ಥೆಯನ್ನು ನೋಡಲಿಕ್ಕೆ ಸ್ಕೂಲ ಬೋರ್ಡ ಎಂಬುದೊಂದು ಉಪಬೋರ್ಡು ಇರುವದು. ಇದರ ಅಧ್ಯಕ್ಷನಿಗೆ ಚೇಅರಮನ್ ಎಂಬ ಹೆಸರು.

ಧಾರವಾಡ ಜಿಲ್ಹೆಯ ಜನರು ಇತ್ತಿತ್ತಲಾಗಿ ಈ ಎಲ್ಲ ಸಂಸ್ಥೆಗಳಲ್ಲಿ ಸೇರಿ ಒಳ್ಳೆಯ ಕಳಕಳಿಯನ್ನು ತೋರಿಸಹತ್ತಿದ್ದಾರೆ. ಆದರೆ ಜಿಲ್ಹೆಯಲ್ಲಿ ಅನೇಕ ತರಹದ ಜಗಳಗಳು ಅವೆ. ಈ ಜಗಳಗಳು ಈ ತರಹದ ಸಂಸ್ಥೆಗಳಲ್ಲಿ ಸೇರುವದರಿಂದ ಅನೇಕ ತೊಂದರೆಯಾಗಿದೆ. ಆದರೆ ಈ ಜಗಳಗಳೆಲ್ಲ ಮುಂದೆ ನಾಶವಾಗದೆ ಉಳಿಯಲಾರವು.

ಜಿಲ್ಹೆಯ ರಾಜ್ಯಭಾರ :—ಜಿಲ್ಹೆಯ ಮುಖ್ಯಾಧಿಕಾರಿಯೆಂದರೆ, ಕಲೆಕ್ಟರನು. ಈ ಕಲೆಕ್ಟರನ ಕೈಕೆಳಗೆ ಪರ್ಸನಲ್

ಅಸಿಸ್ಟಂಟನೆಂಬ ಒಬ್ಬ ಅಧಿಕಾರಿಯು ಇರುತ್ತಾನೆ. ಇವನು ಕಲೆಕ್ಟರನಿಗೆ ಎಲ್ಲ ಕೆಲಸಗಳಲ್ಲಿ ನೆರವಾಗುವನು. ಇವನಲ್ಲದೆ ಹುಜೂರ ಡೆಪ್ಯೂಟಿ ಎಂಬ ಬೇರೊಬ್ಬ ಅಧಿಕಾರಿಯು ಇರುವನು. ಇವನ ಕಡೆಗೆ ಜಿಲ್ಹೆಯ ಹಣದ ವ್ಯವಸ್ಥೆಯು ಇರುವತ್ತದೆ. ಇವರಲ್ಲದೆ ಧಾರವಾಡ ಜಿಲ್ಹೆಯನ್ನು ಮೂರು ಭಾಗಗಳನ್ನಾಗಿ ವಿಭಾಗಿಸಿರುವರು. ಈ ಮೂರು ವಿಭಾಗಗಳಲ್ಲಿ ಎರಡು ವಿಭಾಗಗಳ ಮೇಲೆ ಒಂದೊಂದಕ್ಕೆ ಒಬ್ಬೊಬ್ಬನಂತೆ ಡೆಪ್ಯೂಟಿ ಕಲೆಕ್ಟರರುಂಟು. ಒಂದು ಭಾಗವು ಸಾಮಾನ್ಯವಾಗಿ ಪರ್ಸನಲ್ ಅಸಿಸ್ಟಂಟನ ಕಡೆಗೆ ಇರುತ್ತದೆ.

ಡೆಪ್ಯೂಟಿ ಕಲೆಕ್ಟರನ ಕೆಳಗೆ ಪ್ರತಿಯೊಂದು ತಾಲೂಕಿಗೂ ಮಾಮಲೇದಾರನೆಂಬ ಅಧಿಕಾರಿಯು ಇರುತ್ತಾನೆ.

ಮಾಮಲೇದಾರನ ಕೈಕೆಳಗೆ ಪ್ರತಿಯೊಂದು ಗ್ರಾಮಕ್ಕೂ ಪಾಟೀಲ (ಗೌಡ) ಮತ್ತು ಕುಲಕರ್ಣಿ ಎಂಬ ಅಧಿಕಾರಿಗಳು ಇರುತ್ತಾರೆ. ಗೌಡ-ಕುಲಕರ್ಣಿಗಳ ಕೈಯಲ್ಲಿ ವಾಲೀಕಾರರೂ ಮಾದರರೂ ಇರುತ್ತಾರೆ. ಇದಕ್ಕೆಲ್ಲ ಒಂದು ಖಾತೆ ಎಂದು ಹೆಸರು. ಈ ಖಾತೆಗೆ ರೆವ್ಹಿನ್ಯೂ ಖಾತೆಯನ್ನುತ್ತಾರೆ.

ಜಿಲ್ಹೆಯಲ್ಲಿ ಗುನ್ಹೆಗಳು ಆಗದಂತೆ ನೋಡಿಕೊಳ್ಳುವದಕ್ಕೂ, ಆದ ಗುನ್ಹೆಗಳನ್ನು ತಪಾಸು ಮಾಡುವದಕ್ಕೂ ಒಂದು

ಖಾತೆಯುಂಟು. ಇದಕ್ಕೆ ಪೋಲೀಸ ಖಾತೆಯೆನ್ನುತ್ತಾರೆ. ಇದರ ಮುಖ್ಯಾಧಿಕಾರಿಯು ಸುಪರಿಂಟೆಂಡೆಂಟ ಆಫ್ ಪೋಲೀಸ ಎಂಬವನು. ಈತನ ಕೈಯಲ್ಲಿ ಡೆಪೂಟಿ ಸುಪರಿಂಟೆಂಡೆಂಟ ಆಫ್ ಪೋಲೀಸ ಎಂಬವನು ಇರುತ್ತಾನೆ. ಇವನ ಕೈಕೆಳಗೆ ಪೋಲೀಸ ಇನ್ಸಪೆಕ್ಟರರು ಇರುತ್ತಾರೆ. ಇವರ ಕೈಕೆಳಗೆ ಪೋಲೀಸ ಸಬ್ ಇನ್ಸಪೆಕ್ಟರ ಅಥವಾ ಫೌಜದಾರರು ಇರುತ್ತಾರೆ. ಇವರ ಕೈಕೆಳಗೆ ಜಮಾದಾರರೂ, ಜಮಾದಾರರ ಕೈಕೆಳಗೆ ಪೋಲೀಸರೂ ಇರುತ್ತಾರೆ.

ಡಿಸ್ಟ್ರಿಕ್ಟದಲ್ಲಿಯ ಫೌಜದಾರ ಖಟ್ಲೆಗಳನ್ನು ಮತ್ತು ಕೊಡತಗೊಳ್ಳುವ ಇತರ ಜಗಳಗಳನ್ನು ತೀರಿಸಲಿಕ್ಕೆ ನ್ಯಾಯ ಖಾತೆ ಎಂಬುದೊಂದು ಖಾತೆ ಇದೆ. ಇದರ ಮುಖ್ಯ ಅಧಿಕಾರಿಗೆ ಡಿಸ್ಟ್ರಿಕ್ಟ ಮತ್ತು ಸೆಸನ್ಸ ಜಜ್ಜನೆಂಬ ಹೆಸರು. ಇವನ ಕೈಕೆಳಗೆ ಒಬ್ಬ ಅಸಿಸ್ಟಂಟ ಜಜ್ಜನೂ, ಇಬ್ಬರು ಫಸ್ಟಕ್ಲಾಸ ಸಬ್ ಜಜ್ಜರೂ ಇರುತ್ತಾರೆ. ಇವರಲ್ಲದೆ ಜಿಲ್ಹೆಯನ್ನು ಬೇರೆ ಬೇರೆ ಭಾಗಗಳನ್ನಾಗಿ ವಿಭಾಗಿಸಿ ಪ್ರತಿಯೊಂದು ಭಾಗಕ್ಕೆ ಮುನಸೂಫರನ್ನು ನಿಯಮಿಸಿರುತ್ತಾರೆ.

ರಜಿಸ್ಟ್ರೇಶನ್ ಖಾತೆ:—ಪ್ರತಿಯೊಂದು ತಾಲೂಕಿನಲ್ಲಿ ಸಬ್ ರಜಿಸ್ಟ್ರಾರನೆಂಬ ಅಧಿಕಾರಿಯು ಇರುತ್ತಾನೆ. ಈತನ

ಕೆಲಸವೆಂದರೆ, ತಾಲೂಕಿನ ಜನರು ಕೊಡತಗೊಳ್ಳುವ ಮತ್ತು ಬೇರೆ ವ್ಯವಹಾರದ ಕಾಗದ ಪತ್ರಗಳನ್ನು ನೋಂದಾಯಿಸಿ ಕೊಳ್ಳುವದು. ಇವರೆಲ್ಲರ ಮೇಲೆ ಡಿಸ್ಟ್ರಿಕ್ಟ ರಜಿಸ್ಟ್ರಾರನೆಂಬ ವನು ಇರುತ್ತಾನೆ. ಆದರೆ ಈ ನೋಂದಣಿ ಖಾತೆಯ ಜಿಲ್ಹೆಯ ಮುಖ್ಯ ಅಧಿಕಾರಿಯು ಕಲೆಕ್ಟರನೇ ಇರುವನು.

ವನಗಾವಲ ಖಾತೆ :—ಈ ಖಾತೆಯ ಮುಖ್ಯಾಧಿಕಾರಿ ಯು ಡಿವ್ಹಿಜನ್ ಫಾರೆಸ್ಟ ಆಫೀಸರನು. ಇವನ ಕೈಯಲ್ಲಿ ಕಂಝರ್ವೇಟರ ಆಫ್ ಫಾರೆಸ್ಟರನೆಂಬವನು ಉಂಟು. ಇವನ ಕೈಯಲ್ಲಿ ರೆಂಜರರೂ, ಅವರ ಕೈಕೆಳಗೆ ಫಾರೆಸ್ಟ ಗಾರ್ಡರರೂ ಉಂಟು. ಈ ಎಲ್ಲ ಅಧಿಕಾರಿಗಳು ಅಡವಿಯನ್ನು ಸಂರಕ್ಷಣೆ ಮಾಡುವರು. ಅಡವಿಯ ಉತ್ಪನ್ನವು ಬಹಳವಿದೆ.

ಪೋಸ್ಟ ಖಾತೆ :— ಹೆಡ್ ಪೋಸ್ಟ ಆಫೀಸು ಧಾರವಾಡ ದಲ್ಲಿ ಅದೆ. ದೊಡ್ಡ ದೊಡ್ಡ ಊರುಗಳಲ್ಲಿ ಸಬ್ ಪೋಸ್ಟ ಆಫೀಸುಗಳು ಅವೆ. ಪತ್ರವ್ಯವಹಾರವು ಈ ಪೋಷ್ಟಿನಿಂದ ನಡೆಯುತ್ತದೆ.

ವೈದ್ಯಕೀ ಖಾತೆ :—ಜಿಲ್ಹೆಯ ಜನರಿಗೆ ಔಷಧೋಪ ಚಾರವನ್ನು ಮಾಡುವದಕ್ಕಾಗಿ ವೈದ್ಯಕೀ ಖಾತೆ ಇರುವದು.

ಪ್ರತಿಯೊಂದು ತಾಲೂಕಿನಲ್ಲಿ ದವಾಖಾನೆಗಳು ಉಂಟು. ತಾಲೂಕಿನಲ್ಲಿರುವ ಡಾಕ್ಟರನಿಗೆ ಸಬ್ ಅಸಿಸ್ಟಂಟ ಸಿವ್ಹಿಲ್ ಸರ್ಜನನೆಂಬ ಹೆಸರು. ಇವರೆಲ್ಲರ ಮೇಲೆ ಧಾರವಾಡದಲ್ಲಿ ಒಬ್ಬ ದೊಡ್ಡ ಡಾಕ್ಟರನು ಇರುತ್ತಾನೆ. ಅವನಿಗೆ ಸಿವ್ಹಿಲ್ ಸರ್ಜನನೆಂಬ ಹೆಸರು.

ಸ್ಯಾನಿಟರಿ ಖಾತೆ:—ಈ ಸ್ಯಾನಿಟರಿ ಖಾತೆಯಲ್ಲಿ ನಿಮಗೆ ಗೊತ್ತಿರುವ ಅಧಿಕಾರಿಯೆಂದರೆ ವ್ಯೈಲಿಯ ಕಾರಕೂನ. ಇವನಿಗೆ ವ್ಯಾಕ್ಸಿನೇಟರನೆಂಬ ಹೆಸರು. ಇವನು ಎಲ್ಲ ಕಡೆಗೂ ತಿರುಗಾಡಿ ಕೂಸುಗಳಿಗೆ ವ್ಯೈಲಿಗಳನ್ನು ತೆಗೆಯುವನು; ಮತ್ತು ಹಳ್ಳಿಗಳ ಸ್ವಚ್ಛತೆಯ ಕಡೆಗೆ ಲಕ್ಷ್ಯ ಕೊಡುವನು. ಇಂತಹ ವ್ಯೈಲಿಯ ಕಾರಕೂನರ ಮೇಲೆ ಜಿಲ್ಹೆಯಲ್ಲಿ ಸ್ಯಾನಿಟರಿ ಇನಸ್ಪೆಕ್ಟರನು ಇರುತ್ತಾನೆ.

ಎಕ್ಸಾಯಿಜ ಖಾತೆ:—ಗಾಂಜಿ ಮತ್ತು ಅಫೂವಿನ ಅಂಗಡಿಗಳನ್ನೂ, ಸೆರೆಯ ಅಂಗಡಿಗಳನ್ನೂ ನೀವು ನೋಡಿರುವಿರಲ್ಲವೆ? ಅವುಗಳ ಮೇಲ್ವಿಚಾರಣೆಯನ್ನು ಮಾಡುವದಕ್ಕಾಗಿಯೂ, ಸರಕಾರದ ಪರವಾನಗಿಯ ಹೊರ್ತು ಬೇರೆ ಜನರು ಅಫೂ, ಗಾಂಜಿ ಇವುಗಳು ಬೆಳೆಯದಂತೆ ಮತ್ತು ಮಾರದಂತೆ ಹಾಗು ಸೆರೆಯನ್ನು ಮಾಡದಂತೆ ಮತ್ತು ಮಾರದಂತೆ ವ್ಯವ

ಸ್ಥೆಯನ್ನು ಇಡುವದಕ್ಕಾಗಿ ಅಲ್ಲಲ್ಲಿಗೆ ಎಕ್ಸಾಯಿಜ ಸಬ್ ಇನ ಸ್ಪೆಕ್ಟರರೆಂಬ ಅಧಿಕಾರಿಗಳು ಇರುತ್ತಾರೆ. ಇವರ ಮೇಲೆ ಭಾರವಾಡದಲ್ಲಿ ಎಕ್ಸಾಯಿಜ ಸುಪರಿಂಟೆಂಡೆಂಟನೆಂಬ ದೊಡ್ಡ ಅಧಿಕಾರಿಯು ಇರುತ್ತಾನೆ.

ಪಬ್ಲಿಕ್ ವರ್ಕ್ಸ ಖಾತೆ :— ಇದರಲ್ಲಿ ಇರಿಗೇಶನ್ ಖಾತೆಯೆಂದೂ, ಮತ್ತೊಂದು ಎಂಜನೀಯರ ಖಾತೆಯೆಂದೂ ಎರಡು ಭಾಗಗಳುಂಟು. ಇರಿಗೇಶನ್ ಖಾತೆಯವರು ಜಿಲ್ಹೆಯೊಳಗಿನ ಕೆರೆ-ಕಾಲುವೆ ಮುಂತಾದವುಗಳ ವ್ಯವಸ್ಥೆಯನ್ನು ನೋಡಿಕೊಳ್ಳುವರು. ಎರಡನೆಯ ಭಾಗದವರು ಸರಕಾರಿ ಇಮಾರತುಗಳನ್ನೂ, ಲೈನ ಮಾರ್ಗಗಳ ದುರಸ್ತಿ ಮೊದಲಾದ ಕೆಲಸಗಳನ್ನು ಮಾಡಿಸುವರು. ಆದರೆ ಇತ್ತಿತ್ತಲಾಗಿ ಲೈನಮಾರ್ಗದ ಸ್ವಾಮಿತ್ವವನ್ನು ಸರಕಾರದವರು ಡಿಸ್ಟ್ರಿಕ್ಟ ಲೋಕಲ್ ಬೋರ್ಡಿಗೆ ಒಪ್ಪಿಸಿದ್ದಾರೆ.

ವಿದ್ಯಾ ಖಾತೆ :—ಇದು ಮೊದಲಿಗೆ ಸರಕಾರದ ಒಂದು ಮುಖ್ಯ ಖಾತೆಯಾಗಿತ್ತು. ಈಗ ಅದನ್ನು ಸರಕಾರದವರು ಡಿಸ್ಟ್ರಿಕ್ಟ ಲೋಕಲ್ ಬೋರ್ಡಿಗೆ ಒಪ್ಪಿಸಿದ್ದಾರೆ. ಇದರ ಮಾಹಿತಿಯನ್ನು ಡಿಸ್ಟ್ರಿಕ್ಟ ಬೋರ್ಡಿನ ಕೆಳಗೆ ಕೊಟ್ಟಿದೆ.

ಸಹಕಾರಿ ಮತ್ತು ಒಕ್ಕಲತನದ ಖಾತೆ :—ಒಕ್ಕಲಿಗರಿಗೆ ಸಾಲಗಾರರಿಂದ ಆಗುವ ತೊಂದರೆಯನ್ನು ತಪ್ಪಿಸಿ ಅವರಿಗೆ ಯೋಗ್ಯ ಕಾರಣಗಳ ಮೂಲಕ ಹಣವು ಸಿಗುವಂತೆ ಮಾಡುವದಕ್ಕಾಗಿ ಊರೂರಿಗೆ ಸಹಕಾರಿ ಸಂಘಗಳನ್ನು ಸ್ಥಾಪಿಸಿರುವರು. ಒಕ್ಕಲಿಗರು ಬೆಳೆದ ಸಾಮಾನುಗಳನ್ನು ಮಾರುವಾಗ ವ್ಯಾಪಾರಸ್ಥರು ಒಕ್ಕಲಿಗರಿಗೆ ಠಕ್ಕಿಸುವರು. ಇದನ್ನು ನಿವಾರಣೆ ಮಾಡುವದಕ್ಕೆ ಸೇಲ-ಸೊಸಾಯಿಟಿಗಳನ್ನು ಅಲ್ಲಲ್ಲಿಗೆ ಮಾಡಿದ್ದಾರೆ. ಈ ಖಾತೆಯ ಕೆಲಸವು ಇತ್ತಿತ್ತಲಾಗಿ ಬೆಳೆಯುತ್ತ ನಡೆದದೆ. ಸದ್ಯಕ್ಕೆ ಧಾರವಾಡ, ಬೆಳಗಾವ, ವಿಜಾಪೂರ ಈ ಮೂರು ಜಿಲ್ಹೆಗಳಿಗೂ ಕೂಡಿ ಅಸಿಸ್ಟಂಟ ರಜಿಸ್ಟ್ರಾರ ಆಫ್ ಕೋ-ಆಪರೇಟಿವ್ಹ ಸೊಸಾಯಿಟೀಜ ಎಂಬ ಒಬ್ಬನೇ ಅಧಿಕಾರಿಯು ಇರುತ್ತಾನೆ. ಆತನ ಕಚೇರಿಯು ಧಾರವಾಡದಲ್ಲಿ ಅದೆ. ಸಹಕಾರಿ ಚಳವಳಿಯ ಪ್ರಸಾರವು ಧಾರವಾಡ ಜಿಲ್ಹೆಯಲ್ಲಿ ಆದಷ್ಟು ಬೇರೆ ಯಾವ ಕಡೆಗೂ ಆಗಿಲ್ಲವೆಂದು ಹೇಳುತ್ತಾರೆ.

ಒಕ್ಕಲತನದ ಸುಧಾರಣೆಯನ್ನು ಮಾಡುವದಕ್ಕಾಗಿ ಒಕ್ಕಲತನದ ಖಾತೆಯು ನಿರ್ಮಾಣವಾಗಿದೆ. ಈ ಖಾತೆಯವರು ಸುಧಾರಿಸಿದ ಪದ್ಧತಿಯಂತೆ ಒಕ್ಕಲತನ ಮಾಡುವದನ್ನು ಕಲಿಸುವರು. ಯಾವ ಯಾವ ಭೂಮಿಗೆ ಯಾವ

ಯಾವ ಬೆಳೆಯನ್ನು ಬಿತ್ತಬೇಕು; ಯಾವ ಕಾಲಕ್ಕೆ ಬಿತ್ತಬೇಕು; ಎಂತಹ ಗೊಬ್ಬರವನ್ನು ಯಾವ ಕಾಲಕ್ಕೆ ಉಪಯೋಗಿಸಬೇಕು ಮುಂತಾದ ಮಾಹಿತಿಯನ್ನು ಕೊಡುವರು. ಇದಲ್ಲದೆ ಒಳ್ಳೆಯ ಬೀಜಗಳನ್ನೂ, ಕಬ್ಬಿಣದ ರಂಟೆ ಮುಂತಾದ ಗಳೆಯದ ಸಾಮಾನುಗಳನ್ನೂ ಪೂರೈಸುವರು. ಆದರೆ ಈ ಸಂಘಗಳಿಂದ ರೈತರಿಗೆ ಆಗಬೇಕಾದಷ್ಟು ಲಾಭವು ಆಗಿಲ್ಲ.

ಕ್ರಿಮಿನಲ್ ಟ್ರಾಯಿಬ್ಸ ಸೆಟ್ಲಮೆಂಟ:—ಈ ಹೆಸರಿನದೊಂದು ಖಾತೆಯನ್ನು ಸರಕಾರದವರು ಪ್ರಾರಂಭ ಮಾಡಿದ್ದಾರೆ. ಕಾಡುಜನರನ್ನು ತಂದು ಅವರಿಗೆ ಕೆಲಸ ಹಚ್ಚುವದೂ, ಅವರಿಗೆ ವಿದ್ಯೆಬುದ್ಧಿಗಳನ್ನು ಕಲಿಸುವದೂ ಈ ಖಾತೆಯ ಕೆಲಸವು. ಹೀಗೆ ಮಾಡುವದರಿಂದ ಈ ಕಾಡು ಜನರು ಸುಧಾರಿಸುವರು. ಮತ್ತು ಕಳವು, ದರವಡೆ ಮೊದಲಾದ ಗುನ್ಹೆಗಳನ್ನು ಮಾಡುವದನ್ನು ಬಿಡುತ್ತಾರೆ. ಹೀಗಾಗುವದರಿಂದ ಜನರಿಗೂ ಹಿತವಾಗುತ್ತದೆ. ಹುಬ್ಬಳ್ಳಿ ಮತ್ತು ಗದಗಿನಲ್ಲಿ ಈ ಕೆಲಸವು ನಡೆದಿರುತ್ತದೆ. ಅಲ್ಲಿ ಕಾಡು ಜನರ ಎಷ್ಟೋ ಕುಟುಂಬಗಳನ್ನು ತಂದು ಇಟ್ಟಿರುತ್ತಾರೆ.

---

# ೬ನೆಯ ಪ್ರಕರಣ.



## ಧಾರವಾಡ ಜಿಲ್ಹೆಯೊಳಗಿನ ಸಂಸ್ಥಾನಗಳು.

ವಿದ್ಯಾರ್ಥಿಗಳೇ, ಧಾರವಾಡ ಜಿಲ್ಹೆಯ ಸಾಮಾನ್ಯ ಮಾಹಿತಿಯನ್ನು ನಿಮಗೆ ಇಲ್ಲಿಯವರೆಗೆ ತಿಳುಹಿಸಿ ಹೇಳಿದ್ದಾಯಿತು. ಆದರೆ ಇನ್ನೂ ಕೆಲವು ಮಾಹಿತಿಯನ್ನು ಹೇಳುತ್ತೇವೆ. ಧಾರವಾಡ ಜಿಲ್ಹೆಯು ಬ್ರಿಟಿಶರ ಅಧಿಕಾರಕ್ಕೆ ಸೇರಿದೆ. ಆದರೆ ಧಾರವಾಡ ಜಿಲ್ಹೆಯ ಕೆಲವು ಭಾಗಗಳು ದೇಶೀಯ ಸಂಸ್ಥಾನಿಕರ ಅಧಿಕಾರಕ್ಕೆ ಒಳಪಟ್ಟಿರುತ್ತವೆ.

ಸವಣೂರು ಸಂಸ್ಥಾನ:—ಈ ಸಂಸ್ಥಾನದ ನಬಾಬನ ಹೆಸರನ್ನು ನೀವು ಕೇಳಿರಬಹುದು. ಈತನ ಅಧಿಕಾರಕ್ಕೆ ಕೆಲವು ಹಳ್ಳಿಗಳು ಒಳಪಟ್ಟಿವೆ. ಈ ಸಂಸ್ಥಾನಿಕನು ಮುಸಲ್ಮಾನನು. ಈತನ ಪೂರ್ವಜರು ದೊಡ್ಡ ನವಾಬರಾಗಿದ್ದರು. ಈತನು ಧಾರವಾಡ ಕಲೆಕ್ಟರ ಸಾಹೇಬನ ಅಧಿಕಾರಕ್ಕೆ ಒಳಪಟ್ಟಿದ್ದಾನೆ.

ಸವಣೂರ ಸಂಸ್ಥಾನವಲ್ಲದೆ ಬೇರೆ ಸಂಸ್ಥಾನಿಕರ ಸಂಸ್ಥಾನದ ಕೆಲಕೆಲವು ಭಾಗಗಳು ಧಾರವಾಡ ಜಿಲ್ಹೆಯಲ್ಲಿ ಸೇರಿರು

ತ್ತವೆ. ಈ ಸಂಸ್ಥಾನಿಕರು ಈ ಭಾಗಗಳನ್ನು ಬೇರೆ ಬೇರೆ ತಾಲೂಕುಗಳನ್ನಾಗಿ ವಿಭಾಗಿಸಿರುತ್ತಾರೆ. ಇಂತಹ ನಾಲ್ಕು ತಾಲೂಕುಗಳು ಧಾರವಾಡ ಜಿಲ್ಹೆಯಲ್ಲಿ ಉಂಟು. ಅವು ಯಾವವೆಂದರೆ—(೧) ಕುಂದಗೋಳ ತಾಲೂಕು, (೨) ಶಿರಹಟ್ಟಿ ತಾಲೂಕು, (೩) ಲಕ್ಷ್ಮೇಶ್ವರ ತಾಲೂಕು, (೪) ಗುಡಗೇರಿ ತಾಲೂಕುಗಳು. ಕುಂದಗೋಳ ತಾಲೂಕು ಜಮುಖಂಡಿ ಸಂಸ್ಥಾನಕ್ಕೆ ಸೇರಿದೆ; ಶಿರಹಟ್ಟಿ ತಾಲೂಕು ಸಾಂಗಲೀ ಸಂಸ್ಥಾನಕ್ಕೆ ಸೇರಿದೆ; ಲಕ್ಷ್ಮೇಶ್ವರ ತಾಲೂಕು ಮಿರಜಿ ಸಂಸ್ಥಾನಕ್ಕೆ ಸೇರಿದೆ; ಗುಡಗೇರಿ ಸಂಸ್ಥಾನವು ಬುಧಗಾವ ಸಂಸ್ಥಾನಕ್ಕೆ ಸೇರಿದೆ; ಬುಧಗಾವ ಸಂಸ್ಥಾನವು ಮಿರಜಿ ಸಂಸ್ಥಾನದ ಭಾಗವು. ಈ ಸಂಸ್ಥಾನಿಕರು ಧಾರವಾಡ ಜಿಲ್ಹೆಯಲ್ಲಿ ಇರುವದಿಲ್ಲ.

---

## ೭ನೆಯ ಪ್ರಕರಣ.

## ಧಾರವಾಡ ಜಿಲ್ಹೆಯೊಳಗಿನ ಸಂಸ್ಥಾನಗಳಲ್ಲಿಯ ದೊಡ್ಡ ಊರು ಮತ್ತು ಬೇರೆ ಮಾಹಿತಿ.

ಸವಣೂರು:—ಇದು ಸಂಸ್ಥಾನದ ರಾಜಧಾನಿಯು. ಇಲ್ಲಿ ಸವಣೂರ ಸಂಸ್ಥಾನಿಕನು ವಾಸವಾಗಿರುತ್ತಾನೆ. ಈತ

ನಿಗೆ ೨೫ ಹಳ್ಳಿಗಳು ಇನಾಮವಾಗಿರುತ್ತವೆ. ಸವಣೂರ ನವಾ ಬರು ಮೊದಲಿಗೆ ವಿಜಾಪುರದ ಆದಿಲಶಾಹಿಯ ಸುಭೇದಾರ ರಾಗಿದ್ದರು. ಮುಂದೆ ಸ್ವತಂತ್ರರಾದರು. ನಂತರ ಬ್ರಿಟಿಶರ ಆಳಿಕೆಗೆ ಒಳಗಾದರು.

ಸವಣೂರಲ್ಲಿ ತೋಟಗಳು ಹೆಚ್ಚು. ಇಲ್ಲಿಯ ವೀಳೆದೆಲೆ ಗಳು ಬಹು ಪ್ರಸಿದ್ಧವಾಗಿರುತ್ತವೆ.

ಶಿರಹಟ್ಟಿ :—ಇದು ಶಿರಹಟ್ಟಿ ತಾಲೂಕಿನ ಮುಖ್ಯ ಸ್ಥಳ ವು. ಧಾರವಾಡ ಜಿಲ್ಹೆಯಲ್ಲಿ ಸಾಂಗಲೀ ಸಂಸ್ಥಾನಕ್ಕೆ ಸೇರಿದ ಯಾವತ್ತು ಹಳ್ಳಿಗಳನ್ನು ಸೇರಿಸಿ ಶಿರಹಟ್ಟಿ ತಾಲೂಕನ್ನು ಮಾಡಿದ್ದಾರೆ. ಇಲ್ಲಿ ಸಾಂಗಲೀ ಸಂಸ್ಥಾನಿಕರ ಕೈಕೆಳಗಿನ ಮಾಮಲೇದಾರನೊಬ್ಬನು ಇರುತ್ತಾನೆ. ಈ ಊರಲ್ಲಿ ಮುನ ಸೀಪಾಲಿಟಿಯುಂಟು. ಇಲ್ಲಿ ಲಿಂಗಾಯತರ ಫಕ್ಕೀರಸ್ವಾಮಿ ಗಳ ಮಠವಿದ್ದು ಪ್ರತಿ ವರ್ಷ ಜಾತ್ರೆಯಾಗುತ್ತದೆ.

ಕುಂದಗೋಳ :—ಧಾರವಾಡ ಜಿಲ್ಹೆಯಲ್ಲಿ ಜಮುಖಂಡಿ ಸಂಸ್ಥಾನಕ್ಕೆ ಸೇರಿದ ಯಾವತ್ತು ಊರುಗಳನ್ನೆಲ್ಲ ಸೇರಿಸಿ ಕುಂದಗೋಳ ತಾಲೂಕನ್ನು ಮಾಡಿರುತ್ತಾರೆ. ಕುಂದಗೋ ಳವು ಕುಂದಗೋಳ ತಾಲೂಕಿನ ಮುಖ್ಯ ಸ್ಥಳವು. ಈ ಊರು

ಧಾರವಾಡದಿಂದ ಬೆಂಗಳೂರ ಕಡಿಗೆ ಹೋಗುವ ರೇಲ್ವೆ ಮಾರ್ಗದ ಮೇಲೆ ಇರುವದು. ಇಲ್ಲಿ ಸಂಸ್ಥಾನಿಕರ ಮಾಮಲೇದಾರ ಕಚೇರಿಯೂ, ಮುನಸೂಫರ ಕೋರ್ಟೂ ಉಂಟು. ಈ ಊರಲ್ಲಿ ಜಕ್ಕಣಾಚಾರ್ಯನು ಕಟ್ಟಿಸಿದ ಶಂಭುಲಿಂಗ ದೇವರ ಗುಡಿಯು ಬಹು ಪ್ರಸಿದ್ಧವದೆ.

ಲಕ್ಷ್ಮೇಶ್ವರ :—ಧಾರವಾಡ ಜಿಲ್ಹೆಯೊಳಗಿನ ಮಿರಜಿಯ ಸಂಸ್ಥಾನಕ್ಕೆ ಸೇರಿದ ಯಾವತ್ತು ಊರುಗಳನ್ನು ಕೂಡಿಸಿ ಲಕ್ಷ್ಮೇಶ್ವರ ತಾಲೂಕನ್ನು ನಿರ್ಮಿಸಿದ್ದಾರೆ. ಇಲ್ಲಿ ಮಾಮಲೇದಾರ ಕಚೇರಿಯೂ, ಮುನಸೂಫ ಕೋರ್ಟೂ ಉಂಟು. ಇಲ್ಲಿ ಭವ್ಯವಾದ ಮಸೀದೆಯೊಂದು ಉಂಟು. ಇಲ್ಲಿ ಬಹು ಸುಂದರವಾದ ಮಣ್ಣಿನ ಪಾತ್ರೆಗಳೂ, ಧೋತರ ಜೋಡುಗಳೂ ತಯಾರಾಗುತ್ತವೆ.

ಗುಡಗೇರಿ :—ಬುಧಗಾಂವ ಸಂಸ್ಥಾನಿಕರು ಧಾರವಾಡ ಜಿಲ್ಹೆಯೊಳಗಿನ ತಮ್ಮ ಹಳ್ಳಿಗಳನ್ನು ಸೇರಿಸಿ ತಮ್ಮದೊಂದು ತಾಲೂಕನ್ನು ಮಾಡಿರುತ್ತಾರೆ. ಈ ತಾಲೂಕಿನ ಮುಖ್ಯ ಸ್ಥಳವೇ ಗುಡಗೇರಿಯು. ಇದು ಧಾರವಾಡದಿಂದ ಬೆಂಗಳೂರಿಗೆ ಹೋಗುವ ರೇಲ್ವೆ ಮಾರ್ಗದ ಮೇಲೆ ಇರುತ್ತದೆ. ಇಲ್ಲಿ ಸಂಸ್ಥಾನದ ತಾಲೂಕ ಕಚೇರಿಯೂ, ಮುನಸೂಫ ಕೋರ್ಟೂ ಉಂಟು ಇಲ್ಲಿ ಮುನಸೀಪಾಲಿಟಿಯೂ ಅದೆ.

ಗಜೇಂದ್ರಗಡ :—ಇದೊಂದು ಸಣ್ಣ ಸಂಸ್ಥಾನವು. ಘೋರ್ಪಡೆ ಎಂಬ ಸಂಸ್ಥಾನಿಕರ ವಶದಲ್ಲಿ ಉಂಟು. ಈ ಸಂಸ್ಥಾನಕ್ಕೆ ೨೭ ಹಳ್ಳಿಗಳು ಸೇರಿರುತ್ತವೆ. ಗಜೇಂದ್ರಗಡವೇ ಈ ಸಂಸ್ಥಾನದ ಮುಖ್ಯ ಊರು. ಇಲ್ಲಿ ಒಂದು ಈಶ್ವರ ದೇವಸ್ಥಾನವದೆ. ಅದಕ್ಕೆ ಕಳಕ ಮಲ್ಲೇಶ್ವರ ಎಂಬ ಹೆಸರು. ಪ್ರತಿವರ್ಷ ಈ ದೇವರ ದೊಡ್ಡ ಜಾತ್ರೆಯಾಗುತ್ತದೆ. ಇಲ್ಲಿ ಉತ್ತಮ ಶೀರೆ ಮತ್ತು ಖಣಗಳು ಹುಟ್ಟುತ್ತವೆ.

---

## ೮ನೆಯ ಪ್ರಕರಣ.

### ಮುಂಬಯಿ ಕರ್ನಾಟಕ.

ಬಾಲಕರೇ, ಇಲ್ಲಿಯವರೆಗೆ ನಾವು ಧಾರವಾಡ ಜಿಲ್ಹೆಯ ವರ್ಣನೆಯನ್ನು ವಿವರಿಸಿದೆವು. ಆದರೆ ಎಷ್ಟೋ ತಾಲೂಕು ಗಳನ್ನು ಕೂಡಿಸಿ ಒಂದು ಜಿಲ್ಹೆಯನ್ನು ಮಾಡಿರುತ್ತಾರೆ. ಇಂತಹ ಜಿಲ್ಹೆಯು ಕಲೆಕ್ಟರರ ಅಧಿಕಾರಕ್ಕೆ ಒಳಗಾಗಿರುತ್ತದೆ. ಇಂತಹ ಎಷ್ಟೋ ಜಿಲ್ಹೆಗಳನ್ನು ಕೂಡಿಸಿ ಒಂದು ಇಲಾಖೆ ಯನ್ನು ಮಾಡಿರುತ್ತಾರೆ. ನಾವಿರುವ ಧಾರವಾಡ ಜಿಲ್ಹೆಯೂ

ಮತ್ತು ಇಂತಹ ಇನ್ನುಳಿದ ೨೦ ಜಿಲ್ಹೆಗಳೂ ಕೂಡಿ ಮುಂಬಯಿ ಇಲಾಖೆಯಾಗಿರುತ್ತದೆ. ಮುಂಬಯಿ ಇಲಾಖೆಯ ಮುಖ್ಯಾಧಿಕಾರಿಯು ಗವ್ಹರ್ನರನು. ಮುಂಬಯಿ ಇಲಾಖೆಗೆ ಸೇರಿದ ೨೧ ಜಿಲ್ಹೆಗಳ ಜನರು ಒಂದೇ ಭಾಷೆಯನ್ನು ಮಾತಾಡುವದಿಲ್ಲ. ಕೆಲವು ಜಿಲ್ಹೆಯ ಜನರು ನಮ್ಮಂತೆ ಕನ್ನಡ ಮಾತಾಡುತ್ತಾರೆ. ಹಲಕೆಲವು ಜಿಲ್ಹೆಯ ಜನರು ಮರಾಠಿಯನ್ನು ಮಾತಾಡುತ್ತಾರೆ. ಕೆಲವು ಜಿಲ್ಹೆಯ ಜನರು ಗುಜರಾಥಿಯನ್ನು ಮಾತಾಡುತ್ತಾರೆ. ಇನ್ನುಳಿದ ಅಂದರೆ ಸಿಂಧದ ಕಡೆಯ ಜನರು ಸಿಂಧಿಯನ್ನು ಮಾತಾಡುತ್ತಾರೆ. ಒಂದೊಂದು ಭಾಷೆಯನ್ನು ಮಾತಾಡುವವರಲ್ಲಿ ಪ್ರೇಮವು ಹೆಚ್ಚಿಗೆ ಇರುತ್ತದೆ.

ನಾವು ಮಾತಾಡುವ ಭಾಷೆಯು ಕನ್ನಡ. ಧಾರವಾಡ ಜಿಲ್ಹೆಯ ಯಾವತ್ತು ಜನರು ಕನ್ನಡವನ್ನು ಮಾತಾಡುವವರು. ಮುಂಬಯಿ ಇಲಾಖೆಯೊಳಗಿನ ೨೧ ಜಿಲ್ಹೆಗಳಲ್ಲಿ ನಾಲ್ಕು ಜಿಲ್ಹೆಗಳ ಜನರು ಕನ್ನಡ ಭಾಷೆಯನ್ನು ಮಾತಾಡುತ್ತಾರೆ. ಇಂತಹ ಕನ್ನಡ ಮಾತಾಡುವ ಜಿಲ್ಹೆಗಳೆಂದರೆ— (೧) ಧಾರವಾಡ, (೨) ಬೆಳಗಾವಿ, (೩) ವಿಜಾಪೂರ, (೪) ಕಾರವಾರ. ಧಾರವಾಡ ಜಿಲ್ಹೆಯಲ್ಲಿ ಕೆಲವು ಸಂಸ್ಥಾನಗಳು

ಸೇರಿರುವಂತೆ ಬೆಳಗಾವ-ವಿಜಾಪೂರ ಜಿಲ್ಹೆಗಳಲ್ಲಿಯೂ ಕೆಲವು ಸಂಸ್ಥಾನಗಳು ಸೇರಿರುತ್ತವೆ. ಈ ನಾಲ್ಕೂ ಜಿಲ್ಹೆಗಳಿಗೂ ಮತ್ತು ಈ ಜಿಲ್ಹೆಗಳಲ್ಲಿ ಸೇರಿರುವ ಸಂಸ್ಥಾನಗಳಿಗೂ ಕೂಡಿ ಮುಂಬಯಿ ಕರ್ನಾಟಕವೆಂಬ ಹೆಸರು. ಮುಂಬಯಿ ಕರ್ನಾಟಕವೆಂದರೆ, ಮುಂಬಯಿ ಇಲಾಖೆಯಲ್ಲಿ ಇರುವ ಕರ್ನಾಟಕ. ಕರ್ನಾಟಕವೆಂದರೆ, ಕನ್ನಡಿಗರ ದೇಶ. ಕನ್ನಡ ಭಾಷೆಯನ್ನು ಮಾತಾಡುವ ಜನರ ಸಂಖ್ಯೆಯು ಒಂದು ಕೋಟಿಗೆ ಮೀರಿರುತ್ತದೆ. ಕನ್ನಡ ಭಾಷೆಯನ್ನು ಮಾತಾಡುವ ಜನರು ಮುಂಬಯಿ ಇಲಾಖೆಯ, ಮೇಲೆ ಹೇಳಿದ ನಾಲ್ಕು ಜಿಲ್ಹೆಗಳಲ್ಲಿಯೂ, ಸೊಲ್ಲಾಪೂರ ಜಿಲ್ಹೆಯ ಕೆಲವು ಭಾಗದಲ್ಲಿಯೂ, ಮದ್ರಾಸ ಇಲಾಖೆಗೆ ಸೇರಿದ ಬಳ್ಳಾರಿ, ಅನಂತಪುರ, ಕೊಯಿಮತ್ತೂರ, ಸೇಲಮ್, ಮಂಗಳೂರ ಜಿಲ್ಹೆಗಳಲ್ಲಿಯೂ, ಕಡಪಾ ಮತ್ತು ಕರ್ನೂಲ ಜಿಲ್ಹೆಗಳ ಕೆಲವು ಭಾಗದಲ್ಲಿಯೂ, ಮ್ಹೈಸೂರ ಸಂಸ್ಥಾನದಲ್ಲಿಯೂ, ನಿಜಾಮರಾಜ್ಯದ ಒಂದುಮೂರಾಂಶ ಭಾಗದಲ್ಲಿಯೂ ಪಸರಿಸಿದ್ದಾರೆ. ಕರ್ನಾಟಕಸ್ಥರು ಇರುವ ಇದೆಲ್ಲ ಪ್ರದೇಶಕ್ಕೆ ಕರ್ನಾಟಕವೆಂಬ ಹೆಸರು. ಒಂದು ಭಾಷೆಯನ್ನು ಮಾತಾಡುವ ಜನರು ಒಂದೇ ರಾಜ್ಯಕಾರಭಾರದ ಅಥಳಿತಕ್ಕೆ ಸೇರಿದ್ದರೆ ಅವರಿಗೆ ಅನೇಕ ಲಾಭಗಳುಂಟು. ಆದ್ದರಿಂದಲೇ ಕರ್ನಾಟಕದೊಳಗಿನ ದೊಡ್ಡ ದೊಡ್ಡ ಜನರು

ಯಾವತ್ತರೂ ಕೂಡಿ ಇಂಗ್ಲೀಷರ ಆಡಳಿತಕ್ಕೆ ಸೇರಿದ ಕರ್ನಾಟಕದ ಎಲ್ಲ ಭಾಗಗಳನ್ನು ಕೂಡಿಸಿ ಬ್ರಿಟಿಶ ಕರ್ನಾಟಕವೆಂಬ ಇಲಾಖೆಯನ್ನು ಮಾಡಬೇಕೆಂದು ಪ್ರಯತ್ನ ನಡೆಯಿಸಿದ್ದಾರೆ. ಬ್ರಿಟಿಶ ಕರ್ನಾಟಕವು ಒಂದು ಇಲಾಖೆಯಾದರೆ ಯಾವ ಯಾವ ಲಾಭಗಳಾಗುವವೆಂಬದನ್ನು ನೀವು ದೊಡ್ಡವರಾದ ಬಳಿಕ ಮತ್ತು ಹೆಚ್ಚಿಗೆ ಕಲಿತು ವಿದ್ಯಾವಂತರಾದ ಬಳಿಕ ಓದಿ ತಿಳಿದುಕೊಳ್ಳುವಿರಿ.

ಮುಂಬಯಿ ಕರ್ನಾಟಕವೆಂದರೆ, ಮುಂಬಯಿ ಇಲಾಖೆಯೊಳಗಿನ ಕನ್ನಡ ಭಾಷೆಯನ್ನು ಮಾತಾಡುವ ನಾಲ್ಕು ಜಿಲ್ಹೆಗಳೆಂದು ಹಿಂದೆ ಹೇಳಿದೆ. ಈ ಜಿಲ್ಹೆಗಳಲ್ಲಿ ಧಾರವಾಡ ಜಿಲ್ಹೆಯ ವರ್ಣನೆಯನ್ನು ನೀವು ಸಂಪೂರ್ಣವಾಗಿ ಓದಿ ನೆನಪಿನಲ್ಲಿ ಇಟ್ಟುಕೊಂಡಿರುತ್ತೀರಲ್ಲವೆ? ಇನ್ನುಳಿದ ಮೂರು ಜಿಲ್ಹೆಗಳ ಸಂಕ್ಷಿಪ್ತ ವರ್ಣನೆಯನ್ನು ಇದರಡಿಯಲ್ಲಿ ಕೊಟ್ಟಿದ್ದೇವೆ.

ಬೆಳಗಾವ ಜಿಲ್ಹೆ :—ಬೆಳಗಾವಿಯೇ ಬೆಳಗಾವ ಜಿಲ್ಹೆಯ ಮುಖ್ಯ ಸ್ಥಳವು. ಇದು ರೇಲ್ವೆಯ ದಾರಿಯ ಮೇಲೆ ಅದೆ. ಜಿಲ್ಹೆಯ ಯಾವತ್ತು ಅಧಿಕಾರಿಗಳ ಆಫೀಸು ಇಲ್ಲಿ ಇರುವದು. ಇದಲ್ಲದೆ ದಕ್ಷಿಣಭಾಗದ ಕಮಿಶನರ ಸಾಹೇಬರ ಕಚೇರಿಯೂ

ಉಂಟು. ಇಲ್ಲಿ ದೇಶೀಯ ಮತ್ತು ಇಂಗ್ಲೀಷ ದಂಡಿನ ಛಾವಣಿಗಳು ಉಂಟು. ಇಲ್ಲಿ ಒಂದು ಉತ್ತಮ ಕೋಟೆಯು ಇರುತ್ತದೆ. ಈ ಕೋಟೆಯನ್ನು ಇಂಗ್ಲೀಷರು ಕ್ರಿ. ಶ. ೧೮೧೮ರಲ್ಲಿ ಪೇಶ್ವೆಯವರನ್ನು ಗೆದ್ದು ತೆಗೆದುಕೊಂಡರು. ಇಲ್ಲಿ ಬೆಳ್ಳಿ ಭಂಗಾರದ ಒಡವೆಗಳ ಮತ್ತು ಶೀರೆ, ಖಣ, ತಂಬಾಕಗಳ ವ್ಯಾಪಾರವು ಚನ್ನಾಗಿ ನಡೆಯುತ್ತದೆ. ಈ ಜಿಲ್ಹೆಯಲ್ಲಿ ಎಂಟು ತಾಲೂಕುಗಳೂ, ಎರಡು ಪೇಠಿಗಳೂ ಅವೆ.

ತಾಲೂಕಿನ ಮುಖ್ಯ ಸ್ಥಳಗಳು:—ಬೆಳಗಾವಿ, ಚಿಕ್ಕೋಡಿ, ಖಾನಾಪೂರ, ಗೋಕಾವಿ, ಅಥಣಿ, ಬೈಲಹೊಂಗಲ, ಸವದತ್ತಿ, ಹುಕ್ಕೇರಿ.

ಪೇಠೆಯ ಮುಖ್ಯ ಸ್ಥಳಗಳು:—ಮುರಗೋಡ ಮತ್ತು ಚಂದಗಡ.

## ವ್ಯಾಪಾರ ಸ್ಥಳಗಳು.

ಅಥಣಿ:—ಇಲ್ಲಿ ಅರಳೆ ಮತ್ತು ಕಿರಾಣಿ ಸಾಮಾನುಗಳ ವ್ಯಾಪಾರ ನಡೆಯುತ್ತದೆ.

ನಿಪ್ಪಾಣಿ:—ಇಲ್ಲಿ ಬೆಲ್ಲ ಮತ್ತು ತಂಬಾಕಗಳ ವ್ಯಾಪಾರವು ನಡೆಯುತ್ತದೆ.

ಶಹಪೂರ:—ಇಲ್ಲಿ ಶ್ರೈಭಂಗಾರದ ಒಡವೆಗಳೂ ತಾಮ್ರ ಹಿತ್ತಾಳೆಯ ಪಾತ್ರೆಗಳೂ ತಯಾರಾಗುತ್ತವೆ.

ಗೋಕಾಕ:—ಇಲ್ಲಿ ಘಟಪ್ರಭಾ ನದಿಯ ಸುಂದರವಾದ ತಡಸಲವದೆ. ಇದರಿಂದ ವಿದ್ಯುತ್ತನ್ನು ಹುಟ್ಟಿಸಿ, ಅದರ ಸಹಾಯದಿಂದ ನೂಲುವ, ನೇಯುವ ಗಿರಣಿಯನ್ನು ನಡೆಯಿಸುತ್ತಾರೆ. ಇಲ್ಲಿ ತರತರಹದ ಬಣ್ಣದ ಆಟದ ಸಾಮಾನುಗಳೂ, ಗೊಂಬೆಗಳೂ ತಯಾರಾಗುತ್ತವೆ.

ಖಾನಾಪೂರ:—ಇಲ್ಲಿ ಪಾತ್ರೆಗಳನ್ನು ಮಾಡುವ ಉತ್ತಮ ತರಹದ ಮಣ್ಣು ಸಿಗುತ್ತದೆ. ಇತ್ತಿತ್ತಲಾಗಿ ಇಲ್ಲಿ ಮಂಗಳೂರ ನಮೂನೆಯ ಹಂಚನ್ನು ಮಾಡುವ ಕಾರಖಾನೆಯೊಂದನ್ನು ಮಾಡಿರುತ್ತಾರೆ. ಅಲ್ಲದೆ ಎಲ್ಲ ಜಿಲ್ಹೆ ಮತ್ತು ತಾಲೂಕುಗಳಿಗೆ ಸರಾಯಿಯನ್ನು ಪೂರೈಸುವ ದೊಡ್ಡದೊಂದು ಡಿಸ್ಟಿಲರಿಯು ಮೊದಲು ಇತ್ತು.

ಹೊಳೆಗಳು:—ಉತ್ತರದಲ್ಲಿ ಕೃಷ್ಣಾನದಿಯೂ, ಮಧ್ಯದಲ್ಲಿ ಘಟಪ್ರಭಾ ನದಿಯೂ, ದಕ್ಷಿಣದಲ್ಲಿ ಮಲಪ್ರಭಾ ನದಿಯೂ ಹರಿಯುತ್ತವೆ.

ರೇಲ್ವೆಯು:—ಪುಣೆಯಿಂದ ಧಾರವಾಡದ ಕಡೆಗೆ ಬಂದಿರುವ ರೇಲ್ವೆ ಮಾರ್ಗವು ಬೆಳಗಾವಿಯ ಮೇಲೆ ಹಾಯ್ದು ಧಾರವಾಡಕ್ಕೆ ಬಂದಿರುತ್ತದೆ.

ವಿಜಾಪುರ ಜಿಲ್ಹೆ :—ವಿಜಾಪುರವು ಈ ಜಿಲ್ಹೆಯ ಮುಖ್ಯ ಸ್ಥಳವು. ಇದು ಹುಟಗಿಯಿಂದ ಗದಗಿಗೆ ಬರುವ ರೇಲ್ವೆ ದಾರಿಯ ಮೇಲೆ ಅದೆ. ಜಿಲ್ಹೆಯ ಯಾವತ್ತು ಕಚೇರಿಗಳು ಇಲ್ಲಿ ಇರುತ್ತವೆ. ಇದು ಮೊದಲಿಗೆ ಆದಿಲಶಾಹಿಯ ರಾಜ ಧಾನಿಯಾಗಿತ್ತು. ಇಲ್ಲಿ ವಿಜಾಪುರದ ಅರಸರು ಕಟ್ಟಿಸಿದ ದೊಡ್ಡ ದೊಡ್ಡ ಇಮಾರತುಗಳು ಬಹಳ ಅವೆ. ಗೋಳಗು ಮುಟವೆಂಬದು ನೋಡತಕ್ಕಂತಹದಿರುತ್ತದೆ. ಇದು ಜಗತ್ತಿ ನಲ್ಲಿ ದೊಡ್ಡ ಗುಮುಟವೆಂದು ಹೇಳುತ್ತಾರೆ.

ತಾಲೂಕುಗಳು:—ವಿಜಾಪುರ, ಬಾಗಲ ಕೋಟೆ, ಬಾದಾ ಮಿ, ಹುನಗುಂದ, ಮುದ್ದೇಬಿಹಾಳ, ಶಿಂದಗಿ, ಬಾಗೇವಾಡಿ, ಇಂಡಿ ಎಂಬ ಎಂಟು ತಾಲೂಕುಗಳೂ, ಬೀಳಗಿ ಎಂಬ ಒಂದು ಪೇಠೆಯೂ ಉಂಟು.

## ವ್ಯಾಪಾರ ಸ್ಥಳಗಳು.

ಬಾಗಲಕೋಟೆ:—ಇದು ಘಟಪ್ರಭಾ ನದಿಯ ದಡದ ಮೇಲೆ ಅದೆ. ಹುಟಗಿಯಿಂದ ಗದಗಿಗೆ ಬರುವ ರೇಲ್ವೆಯು ಬಾಗಲಕೋಟೆಯ ಮೇಲಿಂದ ಹಾಯ್ದು ಬಂದದೆ. ಇಲ್ಲಿ ಅರಳೆಯ ವ್ಯಾಪಾರವು ಬಹಳವಾಗುತ್ತದೆ. ಜವಳಿಯ ವ್ಯಾಪಾ ರವು ಚನ್ನಾಗಿ ನಡೆಯುತ್ತದೆ.

ಗುಳೇದಗುಡ್ಡ :—ಇಲ್ಲಿ ಉತ್ತಮ ಖಣಗಳು ಹುಟ್ಟಿ ಪರ ಸ್ಥಳಕ್ಕೆ ಮಾರಾಟಕ್ಕೆ ಹೋಗುತ್ತವೆ.

ಇಳಕಲ್ಲು :—ಇಲ್ಲಿಯ ಶೀರೆಗಳು ಬಹು ಪ್ರಸಿದ್ಧವಾದವುಗಳು. ಪುಣೆ, ಮುಂಬಯಿಗಳಿಗೆ ಮಾರಾಟಕ್ಕೆ ಹೋಗುತ್ತವೆ.

ಬಾದಾಮಿ :—ಇದು ರೇಲ್ವೆಯ ದಾರಿಯ ಮೇಲೆ ಉಂಟು. ಇದು ಹಿಂದಕ್ಕೆ ಚಾಲುಕ್ಯರ ರಾಜಧಾನಿಯು. ಇಲ್ಲಿ ಗುಡ್ಡದೊಳಗೆ ಕೊರೆದ ಗುಡಿಗಳು ನೋಡತಕ್ಕಂತಹವಿರುತ್ತವೆ. ಇಲ್ಲಿ ಬನಶಂಕರಿಯ ದೇವಾಲಯವು ಬಹು ಪ್ರಸಿದ್ಧವಿದೆ. ಈ ದೇವಿಯ ಜಾತ್ರೆಯು ಪ್ರತಿವರ್ಷ ಬಂದ ಹುಣ್ಣಿವೆಯ ದಿವಸ ದೊಡ್ಡ ಪ್ರಮಾಣದ ಮೇಲೆ ಆಗುತ್ತದೆ.

ಐಹೊಳಿ :—ಇದು ಇತಿಹಾಸಪ್ರಸಿದ್ಧವಾದ ಊರು.

ಪಟ್ಟದಕಲ್ಲು :—ಇದು ಪೂರ್ವದಲ್ಲಿ ಪ್ರಸಿದ್ಧವಾದ ಪಟ್ಟಣವು.

ಬಾಗೇವಾಡಿ :—ಇಲ್ಲಿ ಶ್ರೀ ಬಸವೇಶ್ವರನು ಹುಟ್ಟಿದ್ದನು

ತಾಳೀಕೋಟೆ :—ಇಲ್ಲಿ ವಿಜಯನಗರದ ಕಡೆಯ ಅರಸನಾದ ರಾಮರಾಜನಿಗೂ ದಕ್ಷಿಣದ ಮುಸಲ್ಮಾನ ಸಂಸ್ಥಾನಿಕ

ರಿಗೂ ದೊಡ್ಡ ಯುದ್ಧವಾಯಿತು. ಈ ಯುದ್ಧದಲ್ಲಿ ವಿಜಯ ನಗರದ ರಾಮರಾಜನು ಮಡಿದನು. ಅಂದಿಗೆ ವಿಜಯನಗರದ ರಾಜ್ಯವು ಸಮಾಪ್ತಿಯಾಯಿತು.

ಹೊಳೆಗಳು :—ಉತ್ತರದಲ್ಲಿ ಭೀಮಾನದಿಯೂ, ಮಧ್ಯ ದಲ್ಲಿ ಕೃಷ್ಣಾ-ಘಟಪ್ರಭಾ ನದಿಗಳೂ, ದಕ್ಷಿಣದಲ್ಲಿ ಮಲಪ್ರಭಾ ನದಿಯೂ ಹರಿಯುತ್ತವೆ.

ರೇಲ್ವೆಯು :—ಹುಟಗಿಯಿಂದ ಗದಗಿಗೆ ಬರುವ ರೇಲ್ವೆ ಯು ವಿಜಾಪುರದ ಮೇಲಿಂದ ಗದಗಿಗೆ ಬಂದಿದೆ.

ಕಾರವಾರ ಜಿಲ್ಲೆ :—ಕಾರವಾರವು ಜಿಲ್ಲೆಯ ಮುಖ್ಯ ಸ್ಥಳವು. ಇದೊಂದು ದೊಡ್ಡ ಬಂದರವದೆ. ಇಲ್ಲಿ ವ್ಯಾಪಾರ ವಾದರೂ ತಕ್ಕಮಟ್ಟಿಗೆ ನಡೆಯುತ್ತದೆ.

ಕಾರವಾರ ಜಿಲ್ಹೆಯಲ್ಲಿ ಕಾರವಾರ, ಅಂಕೋಲಾ, ಕುಮ ಠಾ, ಹೊನ್ನಾವರ, ಶಿದ್ದಾಪುರ, ಶಿರಸಿ, ಯಲ್ಲಾಪುರ, ಹಲ್ಲಿ ಯಾಳ ಎಂಬ ಎಂಟು ತಾಲೂಕುಗಳೂ, ಭಟಕಳ, ಮುಂಡ ಗೋಡ, ಸುಪಾ ಎಂಬ ಮೂರು ಪೇಠೆಗಳೂ ಉಂಟು.

ಬಂದರಗಳು :—ಈ ಜಿಲ್ಹೆಯು ಸಮುದ್ರಕ್ಕೆ ಹತ್ತಿರುವ ದರಿಂದ ಕಾರವಾರ, ಕುಮಠಾ, ಹೊನ್ನಾವರ ಇವು ಮಹತ್ವದ

ಬಂದರಗಳಾಗಿರುತ್ತವೆ. ಮೊದಲು ಕುಮಠೆಯಲ್ಲಿ ಹತ್ತಿ ಮತ್ತು ಮೆಣಸಿನಕಾಯಿಗಳ ವ್ಯಾಪಾರವು ಬಹಳವಾಗಿ ನಡೆಯುತ್ತಿತ್ತು.

## ಬೇರೆ ವ್ಯಾಪಾರ ಸ್ಥಳಗಳು.

ಶಿರಸಿ, ಸಿದ್ದಾಪುರ, ಯಲ್ಲಾಪುರ:—ಅಡಿಕೆ, ಯಾಲಕ್ಕಿ, ಮೆಣಸು, ಬೆಲ್ಲ, ಬಾಳೇಹಣ್ಣುಗಳ ವ್ಯಾಪಾರವು ದೊಡ್ಡ ಪ್ರಮಾಣದಿಂದ ನಡೆಯುತ್ತದೆ. ಯಲ್ಲಾಪುರದಲ್ಲಿ ಸರಕಾರದವರು ಕಟ್ಟಿಗೆಯ ವ್ಯಾಪಾರದ ದೆಸೆಯಿಂದ ದೊಡ್ಡದೊಂದು ಡಿಪೋವನ್ನು ಮಾಡಿದ್ದಾರೆ.

ಬೀಳಗಿ, ಸ್ವಾದಿ, ಬನವಾಸಿ:—ಇವು ಪೂರ್ವಕಾಲದ ಅರಸರ ರಾಜಧಾನಿಗಳು. ಇಲ್ಲಿ ನೋಡತಕ್ಕಂತಹ ದೇವಾಲಯಗಳಿರುತ್ತವೆ.

ಗೋಕರ್ಣ:—ರಾಮಾಯಣ ಹಾಗು ಮಹಾಭಾರತದಲ್ಲಿ ಗೋಕರ್ಣದ ಉಲ್ಲೇಖವುಂಟು. ಇಲ್ಲಿ ಮಹಾಬಳೇಶ್ವರನ ದೇವಸ್ಥಾನವದೆ. ಇದರಲ್ಲಿರುವ ಲಿಂಗವು ಶಿವನು ರಾವಣನಿಗೆ ಕೊಟ್ಟ ಲಿಂಗವೆಂದು ಪ್ರಖ್ಯಾತಿಯದೆ. ಗೋಕರ್ಣವು ಮಹಾಕ್ಷೇತ್ರವೆಂದು ಎಣಿಸಲ್ಪಡುತ್ತದೆ. ಇಲ್ಲಿ ಪ್ರತಿವರ್ಷ ಶಿವರಾತ್ರಿಯಲ್ಲಿ ದೊಡ್ಡ ಜಾತ್ರೆಯಾಗುತ್ತದೆ.

ಉಳವಿ :—ಇಲ್ಲಿ ಶ್ರೀ ಚನ್ನಬಸವೇಶ್ವರನು ಐಕ್ಯವಾಗಿರುತ್ತಾನೆಂದು ಹೇಳುತ್ತಾರೆ. ಇದು ಲಿಂಗಾಯತರ ದೊಡ್ಡ ಕ್ಷೇತ್ರವು. ಪ್ರತಿವರ್ಷ ದೊಡ್ಡ ಜಾತ್ರೆಯಾಗುತ್ತದೆ.

ಹೊಳೆಗಳು :—ಈ ಜಿಲ್ಹೆಯಲ್ಲಿ ಚಿಕ್ಕ ಚಿಕ್ಕ ಒಂಬತ್ತು ನದಿಗಳಿರುತ್ತವೆ. ಇವುಗಳಲ್ಲಿ ವರದಾ, ಶರಾವತಿ, ಶಾಲ್ಮಲಾ ನದಿಗಳು ದೊಡ್ಡವಿರುತ್ತವೆ.

ಗೆರಸೊಪ್ಪೆಯ ತಡಸಲ :—ಶರಾವತಿ ನದಿಯು ಗುಡ್ಡಗಳೊಳಗಿಂದ ಹರಿದು ಗೆರಸೊಪ್ಪೆಯ ಹತ್ತರ ಸುಮಾರು ೯೦೦ ಫೂಟು ಎತ್ತರದ ಮೇಲಿಂದ ಗುಡ್ಡದ ಕೆಳಗೆ ಇರುವ ಕಂದರದಲ್ಲಿ ತಲೆಕೆಳಗಾಗಿ ಬೀಳುತ್ತದೆ. ಈ ನೀರಿನ ದಭದಭೆಯು ಬಹು ರಮಣೀಯವಾಗಿರುತ್ತದೆ. ಇದು ಪೃಥ್ವಿಯ ಮೇಲಿನ ದೊಡ್ಡ ದಭದಭೆಗಳಲ್ಲಿ ಒಂದಾಗಿರುತ್ತದೆ. ಹಿಂದುಸ್ಥಾನದ ಎಲ್ಲ ಭಾಗಗಳ ಜನರೂ, ಪರದೇಶದ ಪ್ರವಾಸಿಕರೂ ಈ ತಡಸಲವನ್ನು ನೋಡಲಿಕ್ಕೆ ಬರುತ್ತಾರೆ. ಈ ತಡಸಲವು ನವಂಬರ ಮತ್ತು ಡಿಶೆಂಬರ ತಿಂಗಳುಗಳಲ್ಲಿ ನೋಡಲಿಕ್ಕೆ ಬಹು ರಮ್ಯವಾಗಿರುವದು.

ಈ ಜಿಲ್ಹೆಯಲ್ಲಿ ರೇಲ್ವೆಯು ಇರುವದಿಲ್ಲ. ರೇಲ್ವೆಯನ್ನು ಹಾಕಿದರೆ ಈ ಜಿಲ್ಹೆಯ ಆರ್ಥಿಕ ಸ್ಥಿತಿಯು ಹೆಚ್ಚಿಗೆ ಸುಧಾರಿಸುವದು.

ಮುಂಬಯಿ ಕರ್ನಾಟಕದೊಳಗಿನ ಸಂಸ್ಥಾನಗಳು :— ಮುಂಬಯಿ ಕರ್ನಾಟಕದಲ್ಲಿ ಕೊಲ್ಹಾಪುರ, ಸಾವಂತವಾಡಿ, ಸಾಂಗಲಿ, ಮಿರಜಿ, ಕುರಂದವಾಡ, ಮುಧೋಳ, ಜಮಖಂಡಿ, ರಾಮದುರ್ಗ, ಅಕ್ಕಲಕೋಟ, ಜತ್ತ ಮತ್ತು ಸವಣೂರು.



ಎಮ್. ಎಸ್ ಕೇಸರಿಯವರು ಬರೆದ

# ಪ್ರೇಮವು ಮಾನವ ಧರ್ಮವಲ್ಲವೇ?

ಇದೊಂದು ಕಾದಂಬರಿಯು. ಬೆಲೆ ೪ ಆಣೆ.

ಇದರ ವಿಷಯಕ್ಕೆ ದೊಡ್ಡ ದೊಡ್ಡ ಜನರು ಉತ್ತಮ ಅಭಿಪ್ರಾಯಗಳನ್ನು ಕೊಟ್ಟಿರುತ್ತಾರೆ; ಉದಾಹರಣೆಗಾಗಿ ಒಬ್ಬರ ಅಭಿಪ್ರಾಯವನ್ನು ಕೆಳಗೆ ಕೊಟ್ಟಿದೆ.

" ಇದೊಂದು ಸಾಮಾಜಿಕ ಕಾದಂಬರಿಯು. ರಾ. ರಾ. **ಎಮ್**. ಎಸ್. ಕೇಸರಿ, ಬಿ. ಎ., ಎಲ್‌ಎಲ್. ಬಿ., ವಕೀಲ, ಧಾರವಾಡ ಇವರು ಇದರ ಲೇಖಕರು. ಇವರು ಬಹು ತೀಕ್ಷ್ಣವಾದ ಬುದ್ಧಿಯುಳ್ಳವರೂ, ಮಹಾ ಸಾಹಸಿಗಳೂ, ದೇಶಾಭಿಮಾನಿಗಳೂ, ಸಮಾಜಸುಧಾರಕರೂ ಆಗಿದ್ದಾರೆ. ಈ ಚಿಕ್ಕ ಕಾದಂಬರಿಯಲ್ಲಿ ಇವರ ಇವೆಲ್ಲ ಗುಣವಿಶೇಷಣಗಳನ್ನು ವಾಚಕರು ಕಂಡುಕೊಳ್ಳಬಹುದು. ಕರ್ನಾಟಕದ ಈಗಿನ ಸಾಮಾಜಿಕ ಸ್ಥಿತಿಯಲ್ಲಿ ಇದೊಂದು ಕ್ರಾಂತಿಯನ್ನುಂಟು ಮಾಡುವ ಕಾದಂಬರಿಯಾಗಿದೆ. ಕರ್ನಾಟಕದಲ್ಲಿ ಇಂತಹ ಉದಾರತತ್ವಗಳನ್ನು ಹರಡುವ ಶ್ರೀ ಕೇಸರಿಯವರಂತಹ ಲೇಖಕರು ಬೇಕಾಗಿದೆ. ಇವರ ಭಾಷಾಶೈಲಿಯು ಸರಳವಾಗಿಯೂ, ಮನೋಹರವಾಗಿಯೂ ಇದೆ. ವಾಚಕರು ಇದನ್ನೋದಿ ಆನಂದಪಡುವರೆಂದು ನನ್ನ ತಿಳುವಳಿಕೆಯದೆ."

ಪುಸ್ತಕ ದೊರೆಯುವ ಸ್ಥಳ :—

ಎಮ್. ಎಸ್. ಕೇಸರಿ ವಕೀಲ,



ಎಮ್. ಎಸ್. ಕೇಸರಿ, ಬಿ. ಎ., ಎಲೆಲ್. ಬಿ.,
ವಕೀಲ, ಧಾರವಾಡ ಇವರು ಬರೆದ
ಕನ್ನಡ ಪುಸ್ತಕಗಳು.

೧ ಕೋಡ ತಾಲೂಕಿನ ವರ್ಣನೆ ೦—೨—
೨ ಧಾರವಾಡ ಜಿಲ್ಹೆಯ ವರ್ಣನೆ ೦—೪—
೩ ಬಾಲವ್ಯಾಕರಣ ೦—೨—೦
ವಿದ್ಯಾರ್ಥಿಗಳು ಈ ಪುಸ್ತಕಗಳನ್ನು ಓದಿ
ದರೆ ತಿರುಗಿ ಎಂದೂ ಮರೆಯಲಾರರು.
೪ ಪ್ರೇಮವು ಮಾನವ ಧರ್ಮವಲ್ಲವೇ? ೦—೪—
ಕರ್ನಾಟಕದೊಳಗಿನ ತರುಣ-ತರುಣಿಯರು
ಈ ಕಾದಂಬರಿಯನ್ನು ಓದದೆ ಇರಬಾರದು.
೫ ಬಸವೇಶ್ವರನೂ ವೀರಶೈವರೂ ೦—೪—
(ಅಚ್ಚಿನಲ್ಲಿದೆ) ಪ್ರತಿಯೊಬ್ಬ ವೀರಶೈವನು
ಓದದೆ ಇರತಕ್ಕದ್ದಲ್ಲ.

ಪುಸ್ತಕಗಳು ಸಿಗುವ ವಿಳಾಸ:—

ಎಮ್. ಎಸ್. ಕೇಸರಿ, ಬಿ. ಎ. ಎಲೆಲ್.
ವಕೀಲ, ಧಾರವಾಡ ಇವರಲ್ಲಿಯೂ
ಮತ್ತು
ಧಾರವಾಡ ಜಿಲ್ಹೆಯೊಳಗಿನ ಯಾವತ್ತೂ ಪ್ರಸಿದ್ಧ
ಪುಸ್ತಕ ವ್ಯಾಪಾರಿಗಳಲ್ಲಿಯೂ ಸಿಗುತ್ತವೆ.